ಅಪ್ರಾಕೃತ ವಾತನ ಅರ್ಧಾಂಗೀ।
ಅಪ್ರಾಕೃತ ಹಯವದನನ ಕರುಣದಿಂದ।
ಅಪ್ರಾಕೃತ ರಹರು ಮುಕ್ತಿಯೋಗ್ಯರು।
ಅಪ್ರಾಕೃತಭಾತನ ಅರ್ಧಾಂಗೀ

### ಜತೆ

ಇಂತು ಈ ಪರಿಜ್ಞಾನ ಉಳ್ಳ ಮಹತ್ಮರ।
ಸಂತತ ಪೊರೆವ ಶ್ರೀಕಾಂತ ಹಯವದನಾ

## ಸುಳಾದಿ ೩.

### ಅಧ್ಯಾತ್ಮ ಪ್ರಮೇಯ

ರಾಗ ಪಂತುವರಾವಳಿ — ಧ್ರುವತಾಳ

ಒಪ್ಪುವ ಮಾನಿಸ ದೇಹಂಗಳೆಲ್ಲ ಬ್ರಹ್ಮಪುರಕೊಂಭತ್ತುದ್ವಾರಗಳ
ಇಪ್ಪತ್ತೆರಡು ಸಾವಿರ ನಾಡಿಗೊಳು।
ಇಪ್ಪವು ಗಡಾ ಬೀದಿ ಬೀದಿಯಂತೆ।
ಅಪ್ರತಿ ಮಹಿಷ್ಠೈಕ ನಾಮ ರಾಜ ಬೀದಿ ಇ।
[illegible] ಪದರೊಳು ಒಗೆ ಒಗೆಯು।
ಸರ್ಪ ಶಯನನ ಸೋಂಗ [illegible]
ನ [illegible] ಹಂಚು ಬೆಳಕು ಗಡಾ।
ತಪ್ಪದೆ ಸುಖಸಂಬೊ ಸಕ್ಕರೆ ಹೇರು।
ಒಪ್ಪದು ಗಡಾ ಗಡಾ ದ್ವಾರದಲ್ಲಿ।
ಅಪ್ರತಿ ಮೊದಲಾದ ದೇವಕ್ಕಳೆಲ್ಲ ಬ್ರ।
ಹ್ಮಪಾಲಕರಾದರು ಪಟ್ಟಣ ಸಪ್ಪಿನಿಗೆ।
ಅರ್ಪಿಸುವರು ಗಡಾ ಹಯವದನನಿಗೆ ಅವ।
ನಪ್ಪನೆಯಲ್ಲಿ ತಮಗಲ್ಪ ಗಡಾ।
ಅಪ್ರಿಯವಾದ ದುಃಖಗಳೆಂಬುಳ್ಳಿಯ ಹೇರು।
ಅಲ್ಪಸಾರ ಜೀವದಂಗಡಿಯಲ್ಲಿ ಗಡಾ

### ಮಟ್ಟತಾಳ

ಬೀದಿ ಬೀದಿಯಲ್ಲಿ ಇರುಳು ಹಗಲು।
ಕಾದು ಕೊಂಡಿಹರು ತಳವಾರ ದೈವರು।
ಮಾಧವಗತಿ ಪ್ರಿಯುಂಬವರೆಂದೆಂದು।
ಹಾದಿಯು ಕೊಡರು ಪ್ರತ್ಯಕ್ಷಚೋರರಿಗೆ।
ಆಧಿಕಾರಿಕ ಮೊದಲಕ್ಷಗ್ರೇಸರರು।
ಈ ಪರಿಯೊಳು ಹಯವದನ ನಾಳುಗಳು।
ಮಾಧವ ಗತಿ ಪ್ರಿಯುಂಬವರೆಂದೆಂದು ೨

### ರೂಪಕ ತಾಳ

ಭಕ್ತಾಂಕ ಮೊದಲಾದ ಎಲ್ಲ ಪಟ್ಟಣದೊಳು।
ಪ್ರೇಕ್ಷಾ ಬೇಡುವರು ಬೀದಿ ಬೀದಿಯಲ್ಲಿ।
ಅಕ್ಷಯಾ ಈ ಜೀವ ಒಂದು ನಾಡಿವಾಸಾ।
ರಕ್ಷಿಸಿ ಕೊಂಬುವದಲ್ಲಿಹ ಮೂವರು।
ಪಕ್ಷ ನಾಶನಗಲ್ಲದೀ ದೇಹ ಭೋರಿತನ।
ದಾಯ ಜೀವಂಗೆಂತಪ್ಪದೊ ಹಯವದನಾ ೩

### ಝಂಪೆತಾಳ

ಇಂತಿ ಪಟ್ಟಣನಾಡಿ ಪಂಚ ಎಂಟು।
ಭ್ರಾಂತವಾಯು ನಾದೀ ಪರಿಯ ಮನೆಯೊಳು।
ಅಂತ ವಿಲ್ಲದ ಜೀವರಾಶಿಯಲ್ಲಿ ಪೊಗಿಸಿ।
ಚಿಂತೆಗೊಳಗು ಮಾಡಿ ಕರ್ಮಪಾಶದಿಕಟ್ಟಿ।
ಸಂತತ ಪಾಲಿಸುತಿಹ ಹರಿಪುರವಿದು।
ಸಂತೆ ಜೀವರಿಗೆ ಎಂತೊಪ್ಪೋದೆ ಹಯವದನಾ ೪

### ತ್ರಿಪುಡಿ ತಾಳ

ತಾಯಿ ಪೊಟ್ಟೆಯೊಳಿರಲು ದೇಹವಾರಿಚ್ಛೆ।
ಬಾಯಿ ಬಿಟ್ಟಳುವಾಗ ದೇಹವಾರಿಚ್ಛೆ।
ಕಾಯ ತನ್ನಗಲುತಿಹ ದೇಹವಾರಿಚ್ಛೆ।

ರಾಯ ಬಿಟ್ಟು ಹಿಡಿಯೆ ದೇಹವಾರಿಚ್ಛೆ।
ಪಾಯಿಸವ ಸುರಿವಾಗ ಹೇಯುವಾರಿಚ್ಛೆ।
ಶ್ರೀಯರಸ ಹಯವದನ ಹರಿಪುರದರಸು

ಧ್ರುವತಾಳ

ಅನಿಲಾನು ಅನಳಾನು ಅಣು ತೃಣವೆಂದು ಮುನ್ನ।
ಕಣಕಲಾರದೆ ದುರ್ಮದದಿ ತಿರುಗಿದರೇನು।
ಇನಿತು ತತ್ವದ ಜೀವರನು ಮುನ್ನೆ ಹರಿ ತಾನು।
ಅನೇಕ ರೂಪದಿ ಪೊಕ್ಕು ನಡೆಸಿ ಕೊಂಬೆ ನೆನಲು।
ಅನಿಮಿಷರಿಗಲ್ಲದೆ ಘನತೆ ನರರಿಗುಂಟೆ।
ಗುಣನಿಧಿ ಹಯವದನ ನಾಧೀನ ಜಗವೆಲ್ಲ

ಅಟ್ಟತಾಳ

ದೇಹ ಬಂಧನವ ಬಿಡಿಸುವರೆ ಹರಿಯಾಕೆ।
ದೇಹದಾತ ನೀನಾದಡೆ ಮರುಳೆ।
ದೇಹಕೆ ಕ್ಲೇಶ ಸಂಕಟ ವಿದ್ಯಾತಕೆ।
ದೇಹದಾತ ಶ್ರೀ ಹಯವದನನೆ।
ದೇಹಿಗೆ ದೇಹಾ ದೇಹದ ಯೋಗ ವಿಯೋಗಕಧಿಪತಿಯೆ

ಆದಿತಾಳ

ನಿನ್ನದಂತಿಹ ಇಂದ್ರಿಯ।
ನಿನ್ನದಂತಿಂದ್ರಿಯ ದರಸುಗಳಿರಲು।
ನಿನ್ನದಂತಸುಗಳ ವಾರ್ತನೆ।
ನಿನ್ನದಂತೆ ದೇಹ ವಿಚಾರ ತನು ವಿದಾರವು।
ನಿನ್ನದಂತೆ ದೇಹ ನೀ ನಿದ್ರೆಗೈಯು।
ಮನ್ನದಿ ನಂಬು ಜೀವಸಿರಿ ಹಯವದನಾ

ಜತೆ

ದೇಹಿ ಅರಸು ನೀನೆ ದೇಹದರಸುನೀನೆ।
ಶ್ರೀ ಹಯವದನನೆ ಸರ್ವರರಸುನೀನೆ.

## ಸುಳಾದಿ ೪

### ಹರಿಯೆ ಸರ್ವೋತ್ತಮನೆಂಬ ಪ್ರಮೇಯ ಸಾಧನ ವಿಷಯ

ರಾಗ ಪಂತುರಾವಳಿ ಧ್ರುವತಾಳ

ಅಂಬಿಕಾಪತಿ ಉಮಾಪತಿ ಎಂದು ವೇದ ತ್ರಿ।
ಯಂಬಕನ ಗೌರಿಯರಸನ ತುತಿಸು ತಿಪಕೋ।
ಸಾಂಬ ಶಿವನೆಂಬವನು ಇವನೆ ಆದಡೆ ಜಡೆಯು।
ಸಂಭ್ರಮದಿಂವ ಗಂಗೆ ಗರ್ವಿಸಲೀಸಳು।
"ಡಂಭ ಏಕೋ ರುದ್ರ್ರನ ದ್ವಿತೀಯುವತಸ್ಥೆ"
ಎಂಬ ಶ್ರುತಿ ಇನ್ನೊಬ್ಬ ಶಿವನಿಗವ ಸಖನುವ।
ಡಂಬಡಮ ವಿಷ್ಣುನೆಂಬವತಾರ ಮೂಲರೂಪ।
ಇಂಭವಿಪ ಬ್ರಹ್ಮರುದ್ರರ ಸೃಷ್ಟಿಗೆ।
ಇಂಬು ಸಲ್ಲುವದು "ತ್ರಿಷ್ವಧಿಕೇಷುಕೊ ಮಹಾನ್।"
ಎಂಬ ಹಿರಿಯರ ಮತವ ಸುಮತವೆಂಪು।
ನಂಬು ಮನುಜ ಸ್ತಂಭ ಸಂಭವರು ತ್ರಿಶೀರ್ಷೀಕನುಪೂರಗಡ।
ಅಂಬುಜಾಕ್ಷ ಹಯವದನ ಅಖಿಳರೊಡಿಯಾ ೧

ಮಟ್ಟತಾಳ

ಆರು ಪುರಾಣ ಗೌರಿಯ ಗಂಡನವು ಮು।
ನುತ್ತಾರು ಪುರಾಣ ಚತುರ ಮುಖನವು।
ಆರು ಪುರಾಣ ಹಯವದನನವು।
ತೋರೋ ಸಾಂಬಶಿವನ ಪುರಾಣವ।
ಭಾರತ ಪುರಾಣದೊಳಗಿಲ್ಲದ ಕಾರಣ ಶಶಶೃಂಗ ನಿನ್ನ ಶಿವಾ ೨

ತ್ರಿವಿಡಿತಾಳ

ಕೈಲಾಸ ರುದ್ರನದು ವೈಕುಂಠ ಲೋಕ ನಮ್ಮ।
ಶ್ರೀಲೋಲನಿಹ ಲೋಕ ಜಲಜ ಸಂಭವನಿಗೆ।
ಮೂಲೋಕವಲ್ಲವೆ ಮೇಲಿನ ಸತ್ಯಲೋಕ।
ಪೇಳೊ ನಿನ್ನ ಸಾಂಬಶಿವನ ಲೋಕ।

ಖೂಳಜನ ರೊಡನಾಡದಿರು ದುರುಕ್ತಿಯು ಬಿಡು।
ಸಾರೂ ಸಜ್ಜನ ಕುಲದೈವಹಯುವದನನ್ನ।
ಆಳಾಗಿ ಬದುಕು ಶ್ರೀಹರಿ ಸರ್ವೋತ್ತಮನೆಂಬ।
ಸಾರ ಮತವನು ಸೇವಿಸು ಮನುಜ

**ರೂಪಕತಾಳ**

ಶ್ರುತಿ ಪುರಾಣದೊಳಿಲ್ಲದ ಕ್ಷಿತಿಯೊಳರ್ಚನೆಗಲ್ಲದ
ಮತಿಜ ದೇವಕ್ಕಳೊಲ್ಲದ ಮತಿವಂತರ ಮುಂದೆ ನಿಲ್ಲದ।
ಮತ ವಿದ್ಯಾತಕೋ ಸಲ್ಲದ ನಮ್ಮ।
ಕೃತಿಪಯುವದನ ಬಲ್ಲಿದಾ

**ಝಂಪೆತಾಳ**

ಪರಶಿವ ನಿರಾಕಾರನಾದಡೆ ನಿರ್ಗುಣಬೋಮ್ಮ।
ಹರ ಶಿವಾದಿ ಪೆಸರುಪಂಚಮುಖನಿಗಲ್ಲದೆ ಸಲ್ಲ।
ಶರೀರ ಧರಿಸಿದಡೆ ಜನ್ಮ ಮರಣಗಳು ಬಿಡವು ನಿನ್ನ।
ಪುರುತ್ಸಾಹ ಬರಿದೆ ಪೋಯಿತೊ ಪರಶಿವ।
ಪರ ದೇವನೆಂದು ವಾಸುದೇವಗೆ ನಾ।
ಸಿರನಾಮ ಪೊಳಿದ್ದ ಕಾರಣ ಪರಶಿವನವನೆ।
ಹರತೊಬ್ಬ ಶಿವನಿಲ್ಲ ಪರಾತ್ಪರ ನಮ್ಮ।
ಸಿರಿದೇವಿ ರಮಣ ಹಯವದನ ಕಾಣೋ

**ರೂಪಕ ತಾಳ**

"ತ್ರಯ ತ್ರಿಂಶದ್ವೈ ದೇವಾ ಸೋಮಪಾ" ಎಂದು।
ಪ್ರಿಯಾ ಪತ್ರಿಯಾಧಾನಾ" ಮೂವರು ದೇವರು, ನಿ।
ಶ್ಚಯಿಸಿ ಪೇಳಿದ ಕಾರಣದೀ ಇನ್ನೊಂದು ಧೈವ್ವದ ಮತ್ತೆಲ್ಲಿಹದೊ
ನ್ಯಾಯಾ ವೆಲ್ಲಿಹದೊ ಪೇಳೆಲೊ ಕುವಾದಿ।
ನ್ಯಾಯಾ ಕೋವಿದರೊಳು ಶ್ರೀ।
ಹಯ ವದನ ಬೊಮ್ಮ ಶಿವರೆಂಬ ಈ।
ನ್ಯಾಯವ ತಪ್ಪದು ಇನೊಬ್ಬರೊಪ್ಪರೊ

### ತಾಳ ವಿಳಂಬಟ್ಟ

"ನಾಮಾನಿ ಸರ್ವಾಣಿ ಯಮಸಾ ವಿಶಂತಿ ತಂವೈ ವಿಷ್ಣೋ"।
ಎಂದು ಶ್ರುತಿಯಲ್ಲಿ ಸು ಪ್ರಸಿದ್ಧಾ।
ನಾಮಗಳು ಹರಿಯಲ್ಲಿ ಪ್ರವೇಶಿಸಿದ ಕಾರಣ।
ಆಮ್ನಾಯಾಂಬದಂತೆ ಬಹದೂ।
ಭ್ರಾಮಕ ಶ್ರುತಿ ಸ್ಮೃತಿ ವಿರೋಧ ಬಳಿಸಿಕೊಳ್ಳಲಾರದೆ।
ತಾಮುತ್ತೆ ಕೆಡುವೆನೆಂದು।
ಧೀಮಂತರೆಲ್ಲರು ಬಲ್ಲರು।
ನೀ ಮರುಳಾಗಿ ಶ್ರೀ ಹಯವದನನ ಜರಿದು।
ತಾಮಸ ರೋಗ್ಯಾಕೆ ಕೂಡುವಿ ೭

### ಅಟ್ಟ ತಾಳ

ಆದರಿಂದ ಹರಿಸರ್ವೋತ್ತಮನೆಂಬ ಶ್ರುತಿ ಸಮ್ಮತ।
ಮಧುಸೂದನನ ಕೊಂಡಾಡುವುದು ಸಂದೇಹವಿಲ್ಲ।
ವಿಧುಗಳ ಮತದಲ್ಲಿ ಹರಿ ಸರ್ವೋತ್ತಮನೆಂದು।
ಚದುರರೆಲ್ಲರು ಬಲ್ಲರು ಉದಕ ಪಾತ್ರ ಕೊಡಲಿಸ್ಕೊಂಬವೇನನ।
ಹೃದಯ ಕಮಲದೊಳು ನೆಲೆಹಯವದನ ಸನ್ನ।
ಸದ [illegible] ಚೇತನ ಸಮಗುಣ ಭರಿತನ।
[illegible] ಕ್ಲೇಶ ರಹಿತನಾ ೮

### ಆದಿತಾಳ

ಸುತ ಮಿತ್ರ [illegible] ಘನತೆಯು ಬಿಡು ಸ್ಥಿರು।
ಸೋತ್ತಮ ಸಂಪತ್ತಿಯು ಯಜಿಸು ಭವಕತಾರ।
ಹತ್ತಿಲಿ ಸೇರಿ ವಿರಕ್ತಿಯು ಬಿಡದಿರು।
ಭಕ್ತಿಯು ಮಾಡುತಿರು ಹತ್ತವತಾರದ ಹರಿಯು ಚರಿತ್ರೆಯು।
ಸುತ್ತಲಿ ಸುತ್ತುತ ಕೀರ್ತಿಸುತಿರು ಸರ್ವ।
ಕರ್ತ ಹಯವದನ ನತ್ತ ಮನವ ಮಾಡು ದುಸ್ತರ್ಕಗಳ ಬಿಡು ೯

ಜತೆ

ಹಯ ವದನನೆ ಗತಿ ಹಯವದನನೆ ಪತಿ।
ಹಯವದನನೆ ಸುರ ಪತಿ ಸುರರುಗಳಿಗೆ ೧೦

## ಸುಳಾದಿ ೫

### ಶ್ರೀ ವೆಂಕಟೇಶನು ಸ್ವಪ್ನದಲ್ಲಿ ತೋರಿದ ಮಹಾತ್ಮೆ

ರಾಗ ನೀಲಾಂಬರಿ ಧ್ರುವತಾಳ

ಅರಳಿದ ಕೆಂದಾವರಿಯ ಇರವ ಧಿಕ್ಕರಿಸುವ।
ಗಿರಿಯ ತಿಮ್ಮ ರಾಯನ ಚರಣಗಳ ಕಂಡೆನಾ।
ಅರುಣ ತಳದಲ್ಲಿಪ್ಪ ಅಂಕುಶ ಧ್ವಜ ವಜ್ರದಿಂ।
ಸುರುಚಿರ ರೇಖೆಗಳ ಸೊಬಗು ಕಂಡೆನಾ
ಬೆರಳು ಸಾಲ್ಗಳ ಮೇಲೆ ಜೇರಿ ತೋರುವ ಭಾ।
ಸುರುನಖ ಮಣಿ ಗಳೆಸೆವ ಕಿರಣಗಳ ಕಂಡೆನಾ।
ಕಿರಿಗೆಜ್ಜೆ ಕಡೆಯ ಪೆಂಡೆಯ ಪ್ರಭೆಯ ಕಂಡೆ।
ಎರಡು ರನ್ನದ ಕನ್ನಡೆಯ ತೆತ್ತಿಸಿದ ಪೋಲು।
ಮುರಹರನ ಮೋಹನದ ಜಾನು ದ್ವಯವ ಕಂಡೆನಾ।
ಕರಿಯ ದಂತವ ಪೋಲ್ವ ಜಂಘೆಗಳ ಕಂಡೆನಾ
ಉರುಟು ಕದಳಿಯ ಕಂಭದಂತೆ ಉರುತರನಾದ ನತಲ।
ಹರಿಯ ಊರು ಪೀವರಕಂಡೆ ಕನಸಿನಲಿ
ವರ ಪೀತಾಂಬರ ಕಾಂಚಿ ಕಿಂಕಿಣಿ।
ಜಾಲಗಳಿಂದ ದಾಮ ಉಡಗಿ ಮೆರೆವ।
ಕರುಣಿ ವೆಂಕಟೇಶ್ವರನ ಕಟಿಯನ್ನು ಕಂಡೆನಾ।
ಕಿಡೊಳ್ಳಿನುದರದಿಂ ನಾಭಿ ತ್ರಿವಳಿ ರೇಖೆಯು ಇಂ।
ದಿರೆ ಅಪ್ಪಿಕೊಂಬ ಮಧ್ಯ ವಲ್ಲಿಕೆಯ ಕಂಡೆನಾ।
ಸರಿದೇವಿ ಸಿರಿವತ್ಸ ಕೊರಳ ಕೌಸ್ತುಭಹಾರ।
ಸರಸದಿಂದೋಲುವ ವಿಶಾಲುರುಸ್ಥಳವ ಕಂಡೆನಾ।
ಭರದಿ ಮಿಂಚುವ ಉರು ಸ್ಥಳವ ಕಂಡೆನಾ।

ಕರ ಚತುಷ್ಟದಲಿಪ್ಪ ಶಂಖ ಚಕ್ರಗದೆ ಪದ್ಮ।
ವರ ಅಭಯಗಳ ಕಂಡೆ ಕರ್ಣಕುಂಡಲ ಪ್ರಭೆಯ।
ತ್ರಿರೇಖಗಳಿಂದೊಪ್ಪುವ ಕಂಠ ಶಂಖದಂದದಿ।
ವರ ವೆಂಕಟೇಶ್ವರನ ಕಂಧರವ ಕಂಡೆನಾ।
ಉರಳುಗೂದಲು ಫಣಿಸಿಂಗಾಡಿಯಂತಿರ್ಪಪುರ್ಬು
ಸರಸಿಜ ನಯನಸುಕಪೋಲಕೂರ್ಮನಂದದಿಗಲ್ಲಕುಂದ
ಫಲ್ಗಳು ಬಿಂಬಾ।
ಘನ ಮಂದಸ್ಮಿತವದನ ಚಂಪಕ ನಾಸಿಕ।
ಸ್ತೂರಿ ನಾಮಗಳಿಂದೆಸೆವ।
ಸಿರಿ ಮೊಗವ ಕಂಡೆನಾ ಸಿರಿಹಯವದನಾ।
ಸಿರಿಶೇಷಗಿರಿ ಅರಸನ ಕಿರೀಟವನೆ ಕಂಡು ಕೃತಾರ್ಥನಾದೆ। ೧

**ಮಟ್ಟ ತಾಳ.**

ಇಂದಿನಾ ಶುಭದಿನಾ ಗೋವಿಂದನ ಕಂಡ ಕಾರಣಾ।
ಹಿಂದಣ ಪಾಪವು ಬೆಂದು ಹೋಯಿತ್ತೈ।
ತಂದೆ ಹಯವದನನ ಒಲಿಮೆಯಿಂದ ಇಂದಿನಾ ಶುಭದಿನಾ। ೨

**ತ್ರಿವಿಡತಾಳ**

ಪಾಪಕಂಜೆನೋನಾ ಸಂತಾಪಕಂಜೆನೋ ನಾನು।
ಆಪತ್ತಿಗಂಜೆ ಯಮನ ಬಾಧೆಗಂಜೆ।
ಶ್ರೀಪತಿ ಹಯವದನನ ಪಾದ ಪದುಮದ ನೆನವೆ ಇದ್ದರೆ ಸಾಕು।
ಆಪತ್ತಿಗಂಜೆ ಯಮನ ಬಾಧೆಗಂಜೆ ೩

**ರೂಪಕ ತಾಳ**

ಗುರು ಭಕ್ತಿ ಬೇಕು ಹಿರಿಯರ ಕರುಣವಿರಬೇಕು।
ಹರಿ ಕಥೆಗಳ ನಿತ್ಯ ಕೇಳುತಲಿ ಇರಬೇಕು।
ವಿರಕುತಿ ಬೇಕು ವಿಷ್ಣನಾರಾಧನೆ ಬೇಕು।
ವರ ಮಂತ್ರ ಜಪಬೇಕು ತಪಬೇಕು ವಿರಕ್ತಿ ಸಾಧನಕೆ।
ಪರಿಪರಿಯ ವ್ರತ ಬೇಕು ಸಿರಿಹಯವದನನ್ನ।
ಪರಮಾನುಗ್ರಹಬೇಕು ವಿಷಯ ನಿಗ್ರಹಬೇಕು। ೪

### ಝಂಪತಾಳ

ಹರಿಸುಗುಣ ಸಾಕಾರ ಸಕಲ ಸುರರೊಡೆಯ ನಿ।
ರ್ಜರರೆಲ್ಲ ಹರಿಯ ಕಿಂಕರರೆಂದರಿಯಬೇಕು।
ಮರಣ ಜನನಾದಿದೋಷಕತಿದೂರನೆಂಬ ಈ।
ಸ್ಮರಣೆ ಸಂತತಬೇಕು ದುರಾಚಾರ ಬಿಡಬೇಕು।
ಸಿರಿ ಹಯವದನ ಶ್ರೀ ಶೇಷಗಿರಿಯರಸನಾ।
ಸ್ಮರಣೆ ಇದ್ದವನೆ ಸಂಸಾರಭಯ ಉತ್ತರಿಸುವ ೫

### ಅಟ್ಟತಾಳ

ಗಾತ್ರವ ಬಳಲಿಸಿ ಸ್ತೋತ್ರಾದಿ ಕೇಳುತ।
ಯಾತ್ರೆಯ ಮಾಡು ವೆಂಕಟಪತಿ ಮೂರ್ತಿಯ।
ನೇತ್ರದಿ ನೋಡು ಸ್ವಾಮಿತೀರ್ಥವ ಕೊಡುವ ನ।
ಭಕ್ತರ ಕಂಡು ಸರ್ವೋತ್ತಮನ ನಂಬು।
ಪೃತ್ಯ ಪೌಂಡ್ರಕನ ವಚನವ ಮಾತ್ರ ಕೆಡಬೇಡ।
ಚಿತ್ರವಿಚಿತ್ರ ಹಯವದನನ್ನು ಸೀ ಕೊಂಡಿಸಿದರೆ ಪಾಲಿಸಿಕೇಳ।
ಯಾತ್ರೆಯ ಮಾಡು ವೆಂಕಟ ಮೂರ್ತಿಯ ೬

### ತ್ರಿಪುಟತಾಳ

ಶ್ರೀನಾಥ ಸ್ತುತಿವಿತ್ತ ಹೀನ ಯೋನಿಗಳಲ್ಲಿ।
ನಾನಾ ಕ್ಲೇಶಗಳುಂಬೋ ಹೀನ ಜೀವನವೆತ್ತ।
ಭಾನು ಮಂಡಲನೆತ್ತ ಜ್ಞಾನಸ್ಫುರಣೆತ್ತ।
ಮಾನವ ಹರಿಯು ತಾನೆಂಬೊದೆತ್ತ।
ದಾನವ ಕುಲ ವೈರಿ ಸಿರಿಹಯವದನನ್ನ।
ಶ್ರೀನಿವಾಸನ ದಾಸದಾಸನೆಂದೆನಿಸೋ ೭

### ರೂಪಕತಾಳ

ಹನುಮಂತನ ನೋಡು ತನ ತನು।
ಮನಧನ ಹರಿಗೊಪ್ಪಿಸಿ।
ನೆನೆವ ಪ್ರಹ್ಲಾದನ್ನ ನೋಡು ತಪ ಮಾಡುವ।

ಮುನಿ ಜನರ ಕಂಡು ನಿನ್ನ ಯಮನದ ಭ್ರಾಂತಿಯ ಬಿಡು।
ಚಿನುಮಯ ಮೂರುತಿ ಹಯವದನನ ಪಾದ।
ವನಜ ಯುಗ್ಮವ ನಂಬೊ ಸಕಲ ಸುಖಕ್ಕೆಂಬೊ ೮

### ಆದಿತಾಳ

ಕಲ್ಯಾಣವೀವ ನಮ್ಮ ಶ್ರೀ ವಲ್ಲಭವನ ಸೇವಿಸಿ ಸಾ।
ವಿಲ್ಲದ ಮುಕ್ತಿಯ ಬೇಡಿಕೊಳ್ಳಿರೋ ಜನದಿಂಗ ನೋ।
ವಿಲ್ಲದತಿ ಸುಖಿಸಲು ಬಲ್ಲಿಂಥ ಕೇಳಿಸಿದರು ಸೀ।
ವಿಲ್ಲ ಕ್ಷುದ್ರವ ಬಿಟ್ಟು ದಾಸರ ಗೆ ಸ್ತೋಗಡಲೀವೆ।
ದಿಲ್ಲಿ ರಾಯನ ಕಂಡು ಪುಲ್ಲನು ಬೇಡುವರೇನೊ।
ವಲ್ಲಿಯೂರು ತಪಸ್ಸು ಇದ್ದಲ್ಲಿ ಸಾಧಿಸಿಕೊಳ್ಳಿರೊ।
ಸುಳ್ಳು ಕಲ್ಲ ಜಲ್ಲಿ ಮುದ್ದು ಬಾಲರ ನೋಡಿ ಲಕ್ಷ್ಮೀ।
ವಲ್ಲಭನಲ್ಲದೆ ಬೇರೆ ಪ್ರಾಣಸನ್ನಿಧಿಯು ಸ್ತ್ರೀ।
ಗೊಲ್ಲನಯ್ಯ ಪೆಂಡರಿ ಬರುವ ಹಯವದನನ ಪಾದ।
ಪಲ್ಲವ ನಂಬೊ ದಂಡಿಗೆ ಹಿಡಿದು ಶರಣೆನದಿ ಮು।
ತ್ತಲ್ಲೆಲ್ಲೇನು ಫಲವಿಲ್ಲ ೯

### ಜತೆ

ತಿರುಮಲ ರಾಯನ ತ್ರಿವಿಕ್ರಮರಾಯನ।
ಸಿರಿ ಹಯವದನನ್ನ ಪರಮೇಶ ಗಯನ್ನ ೧೦

## ಸುಳಾದಿ ೬

### ಐತಿಹಾಸಿಕ ರಾಮಾಯಣ ಸಂಗ್ರಹಕಥಾ, ಶ್ರೀರಾಮ ಮಹಿಮಾ

ರಾಗ ಕಲ್ಯಾಣ — ಧ್ರುವತಾಳ

ದಶರಥ ನಂದನ ಋಷಿಯಾಗ ಸಂರಕ್ಷಣ।
ಶಶಿ ಮುಖಿ ಶಾಪ ವಿಮೋಚನ।
ಪಶು ಪತಿ ಧನು ಭಂಜನ।
ಬಿಸಿಜನೇತ್ರ ಜಾನಕಿ ಕುಶಲ ಮನೋರಂಜನ ಪ।

ರುಶರಾಮ ಗರ್ವನಾಶ ಅಸುರ ಸಂಹಾರಕ।
ದಶರಥಾಜ್ಞಾಥಾಂಕ ದಶ ಶಿರೋಭಗಿನಿ ಶಿಕ್ಷಕ।
ರಸಿಕ ಸುಗ್ರೀವ ಪೋಷಣ ರೌದ್ರವತಿ ನಿಗ್ರಹಣ।
ಅಸಮ ಸೇತು ಬಂಧನ ಅರಿಮುದ ಖಂಡನ।
ಶಶಿಸಿಕರ ಲಾವಣ್ಯ ಶ್ರೀಮುದ್ದು ಹಯವದನ ೧

**ಮಟ್ಟತಾಳ**

ಲಂಕಾನಗರ ಪರಿಸ್ತರಣ ವಾಲಸ್ಯಗ್ರೆಯದೆ ಮಾಡಿದ ಹಸವ।
ಮಂಕರಿಪ ಕುಂಭಕರ್ಣನ ಹೊಡೆದು ಕೆಡುಹಿದಂಥ ಜಾಣ ನಿ।
ಶ್ಶಂಕ ಮುದ್ದು ಹಯವದನ ಶರಣುಹೊಕ್ಕೆ ಕಾಯೊ ಎನ್ನ ೨

**ತ್ರಿವಿಡಿತಾಳ**

ದಶ ಶಿರ ಛೇದನ ಧರಣಿ ಭಯ ಹರಣ।
ಕುಶಲಗಂಧಿನಿ ಗ್ರಹಣ ಕೋವಿದ ಭರತ ಪ್ರಾಣ।
ನಿಶಿಚರ ವಿಭೀಷಣಾರಿಷ್ಟ ಪರಿಹರಣ।
ಶಶಿ ಮಂಡಲ ಭೂಷಣ ಶ್ರೀಮುದ್ದು ಹಯವದನ ೩

**ಅಟ್ಟತಾಳ**

ಅಯೋಧ್ಯಪುರಿಗಾಗತ ಅನುಜ ಮುನಿಸ್ತೋಮ ಗೀತ।
ಪ್ರಿಯ ಪಟ್ಟಾಭಿಷೇಕಿತ ಪತಿ ಸೀತಾ ಸಮೇತ।
ಶ್ರೀ ಪವನಸುತಪಾಲ ಶ್ರೀವೇದಗೀತ ಲೋಲ।
ಭಯಹರ ಹಯವದನ ಭಕ್ತ ಜನಮೋಹನ ೪

**ಆದಿತಾಳ**

ಭೂದೇವ ಮನೋಹರ ಭೂಷಿತ ಪ್ರಿಯಕರ
ಸಾಧು ಬೋಧಾನಂದ ಸಜ್ಜನಾನಂದ।
ವಾದಿ ರಾಜಗೊಲಿದ ಸೋಮನಿಸ್ಸೀಮ।
ಮೋದಿತ ಬುಧ ಜನ ಮುದ್ದು ಹಯವದನ ೫

**ಜತೆ**

ಮುದ್ದು ಹಯವದನದೇವ ಮಾಮವ ಸರ್ವಾ।
ರಾಧ್ಯ ಶ್ರೀರಾಘವ ರಾಜಾಧಿರಾಜ ೬

## ಸುಳಾದಿ ೭ ಸ್ತೋತ್ರ ಭಾಗ

ರಾಗ ಧ್ರುವತಾಳ

ಕಲ್ಕಿಯಾಗಿ ತುರಗವನೇರಿ। ಖಳರ ಕಟಕವಸ್ತೋಕ್ಕು ಹಿಂಭಾಗದ
ಮೂರ್ಖರ ಶಿಕ್ಷಿಸೆನೆಂದು। ಸೊಕ್ಕು ಮುರಿವದಕ್ಕೆ ಭೂಚಕ್ರಗಳು॥
ವಕ್ರದಿಂದ ಲೆಖ್ಖವಿಲ್ಲದೆ ಗಣವ। ಲೆಕ್ಕಿಸದವನ ಜೀವ।
ಐಕ್ಯವ ಪೇಳ್ವವನ್ನ ತಮುಕ್ಕ ನೂಕಬೇಕೆಂದು।
ಉಕ್ಕು ತಗ್ಗಿಸುವದಕ್ಕೆ ಚಿನ್ನಾದ್ಯೈರೊಡನೆ ಜಯುವ।
ಇಕ್ಕೆಲದಲ್ಲಿಟ್ಟುಕೊಂಡ ರಕ್ಕಸ ರಕ್ಕಸಾ ವೈರಿ ಲಕ್ಷ್ಮಿಪ್ರಿಯ।
ರಕ್ಷೆಯಾಗಿ ಪಶ್ಯಮುದನಾ ಜಯುವ ಪಕ್ಕದಿ।
ಸಿಕ್ಕಿಸಿದ ಪರಾಕ್ರಮ ಸಿರಿ ಹಯುವದನ ೧

### ಮಟ್ಟ ತಾಳ

ಕಟ್ಟಿದ ಹೊನ್ನ ಕಠಾರಿಯ ನೋಡು।
ಮೆಟ್ಟಿದರನ್ನ ಥಾವಿಗೆ ನೋಡು।
ತೊಟ್ಟಿಹ ಕನಕ ಕವಚವ ನೋಡು ಹತ್ತಿ।
ಲಿಟ್ಟಿಹ ಖರಾ ಚೂರಿಯ ಕಾಂತಿಯ ನೋಡು।
ದುಷ್ಟರ ತರಿವಾತ ನಿಷ್ಟುರ ಪೊರೆವ ಜಗ।
ಜಟ್ಟಿಯು ನಮ್ಮ ಧಿಟ್ಟಹಯುವದನಾ ೨

### ರೂಪಕ ತಾಳ

ಹಂಸರನೊಹಿಸಿದ ಹಂಸಾಡಿಬಿಕರ।
ಹಿಂಸೆಯ ಮಾಡುವನಿವ ವೈರಿ ಕೋಲಾ(ಹಲಾ)ವರಾಲಾ।
ಅಂಶಿ ಅಂಶನ್ನ ಜರಾಸಂಧ ತಂದ ವಿ।
ಧ್ವಂಸ ವಿನೋದಿ ಸುರ ನಿಃಶಂಕ ಹಂಸವಾದಿನ್ನ ಗುರು।
ಹಯುವದನಖಳ।
ರಂಶ ಕುಠಾರಿ ಎಂಬೊ ಬಿರಿದು ಮೆರದಾ। ೩

### ಝಂಪೆ ತಾಳ

ಆವನ್ನ ಪೊಟ್ಟೆಲೋರ ಮಯನೆಂಬೊ।
ಜೀವನ್ನಗುಟ್ಲ್ಲ ಕೆಡಿಸಿತು ನೋಡಾ ಆ।
ಭವನಟ್ಲ ಬಂದ ಭಸ್ಮಾಸುರನ್ನ।
ಜೀವವೆ ಕೊಂದಿತು ಇವನ ಮುದ್ದು ನೋಡಾ।
ಆವನ್ನ ಬೆರಳುಗಳ ವೃಷ್ಟಾನ್ನವನಿತ್ತು।
ಆವನಂಘ್ರಿಯ ರೇಣು ಶಿಲಿಯನ್ನ ಬಾಲಿಯ ಮಾಡಿತು।
ಆವನುದರುದ್ದ ದೊಡರಗಳಾವ ಮುಂದವು।
ಆವನೆದೆ ಭಗದತ್ತನ್ನ ಆಯುಧವ ತಾಳಿತು।
ಆವ ಸಿರಿ ಹಯವದನ ಶ್ರೀಕೃಷ್ಣನ್ನ ಪು।
ಟ್ಟವದನವೆ ಪೂಥಣಿಯ ಕೊಂದಿತು. ೪

### ತ್ರಿವಿಡಿ ತಾಳ

ಒಂದು ಕರವು ಮಧುವ ಮರ್ದಿಸಿತು ಮ।
ತ್ತೊಂದು ಕರವು ಕೈಟಭನ್ನ
ಚಂದದಿ ಪೆರ್ಮೊಡೆಯಲ್ಲಿಟ್ಟು ಪುಡಿಪುಡಿ ಮಾಡಿಕೊಂಡಿತು।
ಒಂದು ಕರವು ಕಂಸನ್ನ ಕೇಶಿಕೊಂದು ಗಜವ ಕೆಡಹಿತು ಮ।
ತ್ತೊಂದು ಕರವು ಕಲ್ಪತರುವ ಕಿತ್ತಿಪುರಕೆ ತಂದಿತು।
ಒಂದು ಪಾದ ಶಕಟನೆಂಬ ದೈತ್ಯನೊದಯಿತು ಮ।
ತ್ತೊಂದು ಪಾದ ತಾಳೆ ಮರಗಳಖಳರ ಸೊಕ್ಕು ಮುರುಹಿತು।
ಒಂದು ಪಾದ ವಾದಿರಾಜರ ಚಂದದಲ್ಲಿದ್ದು ಪದವಿಯ।
ದೊಂದುಗ ನುಣಿಸುವ ಭೂತವೃಂದ ಶಕ್ತಿಯ ಕುಂದಿಸಿತು।
ಒಂದೊಂದು ರೋಮಗಳು ಕೂಪಲೋಕಂಗಳು ಬೆಳಗಿಸಿಕೊಂಡಿತು
ಒಂದು ಕೂದಲು ಭೂಭಾರವನ್ನೆ ಕುಂದಿಸಿತು ಹಯವದನ। ೫

### ಅಟ್ಟ ತಾಳ

ಆದಂತಿರಲು ಒಬ್ಬ ಈ ಬೆನ್ನು ಮಂದರವ ನೆತ್ತಿ।
ತ್ರಿದಶರಿಗೆ ಸುಧೆಯನುಣಿಸೆ ದಣಿಸಿತು।

ವಿಷಯ ಜೀವನ ಕೋಶ ಎನಿಪ ಬೊಮ್ಮಾಂಡ ಮತ್ತಾ।
ಮುದದಿಂ ದೊರಕದಿಂದ ಜೀವನ ಬೆಸ್ನು।
ಮುದ್ದು ಮಯ ನಮ್ಮ ಗುರುಹಯವದನನಿಗೆ ಆ।
ಯುಧದಹಂಗುಂಟೆನೊ ವಿಚಾರಿಸಿ ನೋಡಿರೊ ೬

ಆದಿ ತಾಳ

ಕುಂಜರ ಮೊರೆ ಇಡೆ ಬಂದೊದಗಿದ ನಿವ।
ಕಂಜಾಕ್ಷಿ ಕರೆಯೆ ಅಕ್ಷಯಾಂಬರವ ಸಿತ್ತವನಿವ।
ಸಂಜೆಯ ತೋರಿಸಿ ಧನಂಜಯನ ಕಾಯ್ದವ ನಿವ।
ಅಂಜಿದ ಪ್ರಲ್ಹಾದಗ ಭಯವಸಿತ್ತವನಿವ।
ನಂಜುಂಡನಾಗಿಯಿದ್ದ ಸಿರಿಹಯವದನ ಭಕ್ತವಜ್ರ।
ಪಂಜರನೆಂಬ ಬಿರಿದು ತಪ್ಪದೆ ನಂಬಿಕೊಳ್ಳಿರೊ ೭

ಏಕತಾಳ

ಆದಿಕಾಲದಲಿ ಅಬ್ಜಭವನಪೆತ್ತವನಿವ।
ಮೇದಿನಿಗಾಗಿ ಬಂದಖಳರ ಕೊಂದವನಿವ।
ಕಾದಿಸಿ ಕೌರವರ ಕುಲವ ತರಿದವನಿವ।
ಆದಿವ್ಯಾಧಿಗಳ ಬಿಡಿಸಿ ಮುಕ್ತಿಯನೀವ।
ದಾರಿಯ ತೋರಿದ ಸಿರಿ ಹಯವದನ ೮

ಜತೆ

ಸಿರಿದೇವಿ ಅರಸ ಹಯವದನನೆನಬೇಕು ಬೇಕು।
ಈ ದೇವನಲ್ಲದೆ ಇನ್ನೊಂದು ದೈವವೆ ಸಾಕುಸಾಕು ೯

## ಸುಳಾದಿ ೮

### ಮತ್ಸ್ಯಾದಿ ದಶ-ಅನಂತಾವತಾರ ಮಹಿಮಾವರಿತು ಸಾಧನ ಮಾಡು

ರಾಗ ವರಾಳಿ ಧ್ರುವತಾಳ

ಹರಿ ನಿನ್ನ ಜ್ಞಾನ ಸಿರಿಗೆಣೆಗಾಣೆ ಮತ್ಸ್ಯವ।
ತಾರದಿ ಶ್ರುತಿಗಳ ವಿಧಿಗೆ ಪೇಳಿದೇಯಾಗಿ।

ಹರಿ ನಿನ್ನ ಶಕುತಿಗೆ ಎಣೆಗಾಣೆ ಜಾಂಡ ಮಂ।
ದರಗಳ ಬೆನ್ನಿಲಿ ಧರಿಸಿ ಮೆರದೆಯಾಗಿ।
ಹರಿ ನಿನ್ನ ಕರುಣಕ್ಕೆ ಎಣೆಗಾಣೆ ವರಹವ।
ತಾರದಿ ದಾಡಿಯಲ್ಲಿ ಧಾರುಣಿಯನೆಗಹಿದೆಯಾಗಿ।
ಹರಿ ನಿನ್ನ ಶೂರತ್ವಕ್ಕೆಣೆಗಾಣೆ ಹಿರಣ್ಯಕನುದರವಬಗದಿ।
ನರಹರಿ ನೀ ಮೆರದೆಯಾಗಿ।
ಹರಿ ನಿನ್ನ ಯುಕುತಿಗೆ ಎಣೆಗಾಣೆ ವಟುವಾಗಿ।
ಚರಣದಿ ಮೂಲೋಕಗಳ ಅಳದೆಯಾಗಿ।
ಹರಿ ನಿನ್ನ ಉದಾರತ್ವಕ್ಕೆಣೆಗಾಣೆ ಮಹಿಯ ವಿ।
ಸ್ತರದ ದ್ವೀಪಗಳ ಭೂಸುರರಿಗೆ ಇತ್ತೆಯಾಗಿ।
ಹರಿ ನಿನ್ನ ವೈರಾಗ್ಯ ಭಾಗ್ಯಕ್ಕೆಣೆಗಾಣೆ।
ಅರಸತ್ವ ತೊರೆದು ಅರಣ್ಯಕ್ಕೆ ಪೋದೆಯಾಗಿ।
ಹರಿ ನಿನ್ನ ಲೀಲೆಗೆ ಎಣೆಗಾಣೆನೋ ಮಹಾ।
ಧುರ ದೊಳು ಕಲಿಪಾರ್ಥನ ಸಲಹಿದೆಯಾಗಿ।
ಹರಿ ನಿನ್ನ ಮಾಯಕ್ಕೆ ಎಣೆಗಾಣೆನೊ ಮು।
ಪ್ಪುರದ ಸತಿಯರ ವ್ರತವ ಕೆಡಿಸಿದೆಯಾಗಿ।
ಹರಿಹಯವದನನೆ ಕಲಿಖಂಡನೆಂಬ।
ಬಿರಿದು ತೋರಿದೆ ಕಲ್ಕಿಯಾಗಿ ಬಲ್ಲವರಿಗೆ ೧

## ಮಟ್ಟತಾಳ

ಅಸುರರ ಮುರಿದೆ ಸುರರನ ಪೊರೆದೆ।
ಶಶಿಮುಖಿ ದ್ರೌಪದಿ ಗಕ್ಷಯಂಬರವನಿತ್ತು ಮೆರದೆ।
ಅಸಮ ರಕ್ಕಸಿಯ ಕಿಂವಿ ಮೂಗುತರಿದೆ।
ಸು ಶರಣರಲ್ಲದೆ ಅನ್ಯರನೊಲ್ಲೆ।
ಪೊಸ ಬಗೆಯ ಶಿರಿಹಯವದನನೆ ಇಂಥ।
ಅಸಮ ಮಹಿಮನೆಂಬ ಪೆಸರು ಧರಿಸಿಕೊಂಡೆ ೨

### ತ್ರಿವಿಡಿತಾಳ

ಸುಧಿಯ ಸಾಧಿಸಿ ತ್ರಿದಶರಿಗಿತ್ತು ಪೊರಿದೆ ಮ।
ತ್ತದ ಕೊದಗಿದ ದಾನವರ ಮರ್ದಿಸಿದೆ।
ಇದೆ ಸಾಕ್ಷಿ ಯಲ್ಲವೆ ನೋಡಲು ಬುಧಜನರು।
ಕದನ ಕರ್ಕಶನೆಂಬ ಬಿರಿದು ತೋರಿದೆ ಜಗಕೆ।
ಮಧು ವೈರಿ ಸಿರಿ ಹಯವದನ ದೇವೋತ್ತಮ।
ಮದ ವಿಲ್ಲದವರ ಎಂದೆಂದು ಪೊರೆವನು।
ಮಧಾಂಧರನ ಎಂದೆಂದು ಮರ್ದಿಸುವನು ೩

### ಝಂಪಿ ತಾಳ

ಸಾತ್ವಿಕರಿಗೆ ಊರ್ಧ್ವ ಲೋಕವ ಮಾಡಿದ ನೋಡಿರೊ।
ಮರ್ತ್ಯರಿಗೆ ಸ್ವರ್ಗ ಭೂನರ್ಕ ಮಾಡಿದ ನೋಡಿರೊ।
ವ್ರಾತ್ಯ ಜನರಿಗೆ ದುರ್ಗತಿಯ ಮಾಡಿದ ನೋಡಿರೊ।
ಸತ್ಯ ಸಂಕಲ್ಪ ಹಯವದನ ಎಲ್ಲರಿಗೆ ಸಮ।
ಮತ್ಯ ಸಮನೆಂತೆಂಬ ನರರಿಗೆ ನಂಬೇ ೪

### ತ್ರಿವಿಡಿ ತಾಳ

ಆದರಿಂದ ದುಮಾರ್ಗದಲ್ಲಿ ನಡಿಯ ಬಾರದು।
ಮದಿರಾಕ್ಷಿಯರ ಮೆಚ್ಚಿ ಮರುಳಾಗಬಾರದು।
ಅಧಮ ದುರ್ಮತಗಳ ಮನಕೆತರಬಾರದು।
ಪದುಮನಾಭನ ಒಮ್ಮೆ ಮರೆದಿರಲಾಗದು।
ಸುದರ್ಶನ ಧರ ಸಿರಿಹಯವದನನ ಪಾದ।
ಪದುಮ ತೋರಿದ ಗುರು ಮಧ್ವರಾಯನಂಬೋ ೫

### ಅಟ್ಟ ತಾಳ

ಆರಾಧನ ನೀರಾಂಜನವೆತ್ತಿ ನಮ್ಮ।
ನಾರಾಯಣಗೆ ನಾನಾ ವಿಧವಾದ।
ಭೂರಿ ನೈವೇದ್ಯಗಳಿಟ್ಟು ಪೂಜಿಸಿ ಅವ।
ನಾರೋ ಗಣೆಯ ಶೇಷ ಭುಂಜಿಸಿ ಸುಖಿಸು ನೀ।

ಶ್ರೀ ರಮಣ ಹಯವದನನ ಚರಿತೆಯ।
ಓರಂತೆ ತುತಿಸಿ ಹಿಗ್ಗುತಲಿರು ಮನದಲ್ಲಿ।
ತಾರತಮ್ಯವರಿತು ಸಾರು ಸುಜರ ೬

**ಆದಿ ತಾಳ**

ಪರಮ ವೈಷ್ಣವ ಗುರುಗಳ ಪಾದಕ್ಕೆರಗು ನೀ।
ಪುರಾಣ ಶಾಸ್ತ್ರಂಗಳ ನಿರುತ ಕೇಳುತಲಿರು।
ಹರಿ ಪರ ದೇವತೆ ಎಂಬ ಜ್ಞಾನವಿಸ್ತರಿಸುತ।
ಧರಿಯೊಳು ಚರಿಸುತಲಿರು ಜೀವ।
ಪರಮ ಕರುಣಿ ಸಿರಿ ಹಯವದನ ಈ।
ಪರಿಯಲಿ ಸ್ಮರಿಸಲು ಪೊರೆವ ಸಂದೇಹವಿಲ್ಲ ೭

**ಜತೆ**

ಸಾಕು ಸಾಕು ಸಂಸಾರ ಸಂಕಟಗಳನೆಲ್ಲ।
ನೂಕು ನೂಕು ಹಯವದನನ ಪ್ರೊಲಿಮೆಯಿಂದ ೮

## ಸುಳಾದಿ ೯ ವೈರಾಗ್ಯಭಾಗ್ಯ

ರಾಗ ಗೌಳ ಧ್ರುವತಾಳ

ಬಲು ಚರ್ಮ ಚೀಲಾದೊಳಗೆ ರಕ್ತ ಮಲಮೂತ್ರ।
ಯಲು ಜಂತುಗಳನು ತುಂಬಿಸಿ ತನ್ಮಧ್ಯ।
ದೊಳು ಮತ್ತು ಮಾಂಸ ಚೀಲವನೊಂದು ನಿರ್ಮಿಸಿ।
ಪೊಲೆಯ ಮೇಲಣ ಶುಕ್ಲ ಶೋಣಿತದೀ।
ಮುಳುಗಿಸಿ ತಂದಿರೆ ದಶಮಾಸ ಪರಿಯಂತ।
ಎಲೆ ಜೀವಾ ಬಹಳ ಕ್ಲೇಶಗಳನುಂಬಿ ನೀನು।
ಇಳೆಗೆ ಬಂದು ಬಾಲಕನಾಗಿ ಮತ್ತು ತೊ।
ಟ್ಟಿಲೊಳು ಪೊರಳಿ ಮಲಮೂತ್ರದಲ್ಲಿ।
ಅಳುವೆ ಹಸುತೃಷಿಯಾದರೆ ಪೇಳಲರಿಯದೆ।
ಬಳಲಿದೆ ನಾನಾ ಜನ್ಮಗಳಲ್ಲಿ ಇನಿತೊ।

ಹುಲಿ ನಕ್ಕಶ್ವಾನ ಸೂಕರ ಯೋನಿಯಲಿ ಬಂದು।
ಕೊಲಿಗೊಳಗಾದೆ ಶ್ರೀ ಹಯವದನನ ಮರೆದೆ ೧

ಮಟ್ಟ ತಾಳ

ವೇದ ಶಾಸ್ತ್ರಂಗಳನೋದಿ ವಾದಿಸುವೆನೋ ವೃತ್ತಿ ಕ್ಷೇತ್ರಕ್ಕಾಗಿ।
ಕ್ರೋಧಿನೃಪರ ಪಾಲ್ಕೈಸಿ ನೊಂದೆ।
ಸ್ತ್ರೀಧನಾದಿಗಳಿಗಾಗಿ ಕೊಡುವೆ।
ಹಾದಿಯು ವಿವಾದ ನಡಿವೆ।
ಕ್ರೋಧಿ ನೃಪರ ಪಾಲ್ಕೈಸಿ ನೊಂದೆ। ೨
ಸಾಧಿಸುವೆನೋ ಪಾಪರಾಶಿಗಳನು।
ಸಾಧು ಸೇವ್ಯ ಹಯವದನಾನೊಲ್ಲೆ।
ಕ್ರೋಧಿ ನೃಪರ ಪಾಲ್ಕೈಸಿ ನೊಂದೆ ೨

ಅಟ್ಟ ತಾಳ

ಧರ್ಮಕರ್ಮಗಳನು ಡಂಭದಿ ಹೆಮ್ಮೆಗಾಗಿ ಮಾಡಿ ಬಳಲುವೆ।
ನಿರ್ಮಲಾತ್ಮರ ನಗುವೇ ನಿಂದಿಪೆ।
ಬೊಮ್ಮರಕ್ಕಸನಪ್ಪೆ ತುದಿಯಲಿ।
ನಿರ್ಮಲಾತ್ಮರ ಜಗುವೆನುಡುವೆ।
ಚಿನ್ಮಯ ಶ್ರೀಹಯವದನನ।
ಒಮ್ಮೆಗಾದರೊಮ್ಮೆ ನೆನೆಯೆ।
ನಿರ್ಮಲಾತ್ಮರ ನಗುವೆ ನಿಂದಿಪೇ ೩

ರೂಪಕ ತಾಳ

ನಾನಾ ನರಕಯಾತನೆಗೆ ಗುರಿಯಾದೆ।
ಹೀನಂಥ ತನುವಿನ ಕ್ಲೇಶವ ನೆನೆದುಕೋ।
ಮಾನವ ಜನುಮವ ಬವೆ ಪೋಗಾಡದೆ।
ಶ್ವಾನಾದಿ ಸಾಧಾರಣ ದೇಹಕ್ಕಿಕ್ಕದೇ।
ಮಾನವ ಜನುಮ ಬರಿದೆ ಪೋಗಾಡದೆ।
ಶ್ರೀನಾಥ ಹಯವದನನಂಘ್ರಿ ಒಲಿಮೆಯಿಂದ

ಜ್ಞಾನನಿಧಿಯೊಳಿಪ್ಪ ಸುಜನರ ಮೊರೆಯೊಗದೆ।
ಮಾನವ ಜನುಮುವ ಬರಿದೆ ಪೋಗಾಡದೆ ೪

ಝಂಪೆ ತಾಳ

ಮದಮತ್ಸರದಿನೊಂದು ಕೆಲವು ಕಾಲವು ಕಳದೆ।
ಕುದಿವೆ ಕಾಮ ಕ್ರೋಧ ವಿಷಯ ಲಂಪಟನಾಗಿ।
ಅಧಮನಾಗಿ ಪರರ ಬೇಡಿ ಬೇಸರಿಸುವೆ।
ಸದನ ಸಂಪದವಿಗೆ ಬಳಲುವೆ ಒಮ್ಮೊಮ್ಮೆ।
ಅಧಮನಾಗಿ ಪರರ ಬೇಡಿ ಬೇಸರಿಸುವೆ।
ಅದರೊಳಗು ಬಹು ವ್ಯಾಧಿಯುಳ್ಳಿ ಸಂಕಟ ಗೊಂಬೆ।
ಪದುಮನಾಭ ಹಯವದನ ಪಾದವನಂಬೆ।
ಅಧಮನಾಗಿ ಪರರ ಬೇಡಿ ಬೇಸರಿಸುವೆ।

ವಿಳಂಬಟ್ಟೆತಾಳ (ಅಟ್ಟ)

ಅನಶನಾಶನಂಗಳ ಸರಿ ಎಂಬ ಜನರರಿಗೆ।
ದಿನದಿನದಿ ಮಾಡುವ ವ್ರತ ವ್ಯಥಾಯಪ್ಪೋಯಿತು।
ಅನಳನು ತುಹಿನವು ಒಂದಾದದುಂಟೆ।
ಘನ ಮಹಿಮ ಮುಕುಂದ ಅಣು ಜೀವನೆಂತಾಹ।
ಅನಳನು ತುಹಿನವು ಒಂದಾದದುಂಟೆ।
ಮನದಿ ತದ್ಭೃತ್ಯಭೃತ್ಯರ ಭೃತ್ಯನೆನ್ನದೆ।
ಮನುಜಾಧಮರು ಹಯವದನ ತಾನೆಂಬರೊ

ತ್ರಿವಿಡಿತಾಳ

ಬಿಸಿಲು ಚಳಿಯಿಂ ಬೇಸರು ವೈಹಸು।
ತೃಷುಗಳಿಂದಲಿ ಹರುಷಗುಂದುವೆ।
ಯಶೋ ಹಾನಿಯ ಮಾಡುವೆ ನಿಂ।
ದಿಸುವ ಮಾನವರೊಶಕೆ ಸಿಲುಕುವೆ।
ಯಶೋ ಹಾನಿಯ ಮಾಡುವೆ।
ಅಸುರ ಭೂತಂಗಳನು ಪೂಜಿಪೆ

ಪ್ರಸನ್ನ ಹಯವದನನರ್ಚಿಸಿ।
ಯಶೋಹಾನಿಯ ಮಾಡುವೆ। ೭

ಆದಿತಾಳ

ಇಂತು ಭವವೆಂಬ ಫಣಿಸಗೆ ಮಾ।
ಹಂತರ ಸಂಗ ಜನಿತ ವೈರಾಗ್ಯವೆ
ಮಂತ್ರರಾಜ ಜಗದೊಳು ಮಂತ್ರರಾಜ।
ಸಂತರ ಚರಣ ಕಮಲ ಸೇವೆ ಔಷಧ
ಮಂತ್ರರಾಜ ಜಗದೊಳು ಮಂತ್ರ ರಾಜ।
ಸಂತತ ಗರುಡ ವಾಹನ ಶ್ರೀ ಹಯವದನ ಶ್ರೀ।
ಕಾಂತ ನಂಘ್ರಿ ಸೇವಿಯೋ ಗರುಡಾಯುಧ।
ಮಂತ್ರರಾಜ ಜಗದೊಳು ಮಂತ್ರ ರಾಜಾ ೮

ಜತೆ

ವೈರಾಗ್ಯ ಭಾಗ್ಯವೆ ಇತ್ತೆನ್ನ ಸಲಹೊ ಸ!
ರ್ವಾರಾಧ್ಯ ನಿರವದ್ಯ ಹಯವದನ ಸ್ವಾಮಿ। ೯

ಸುಳಾದಿ ೧೦

ಶ್ರೀ ಹರಿಪಾದ ನೆರೆನಂಬಿ ಬಾಳ್ವದೇ ಮುಖ್ಯ ಸಾಧನ

ರಾಗ ಧ್ರುವ ತಾಳ

ಹರಿಪಾದ ನೆನೆವಂಗೆ ಅರಿಗಳ ಭಯವಿಲ್ಲ।
ಹರಿಪಾದ ನೆನೆವಂಗೆ ದುರಿತ ಭಯವಿಲ್ಲ।
ಹರಿಪಾದ ನೆನೆವಂಗೆ ನರಕದ ಭಯವಿಲ್ಲ
ಹರಿಪಾದ ನೆನೆವಂಗೆ ಮಾಯಾದ ಭಯವಿಲ್ಲ
ಹರಿಪಾದ ನೆನೆವಂಗೆ ಭವದ ಭಯವಿಲ್ಲ
ಹರಿಪಾದ ನೆನೆವಂಗೆ ವಿಷಯ ಭಯವಿಲ್ಲ
ಹರಿಪಾದ ನೆನೆವಂಗೆ ಜನನ ಭಯವಿಲ್ಲ
ಹರಿಪಾದ ನೆನೆವಂಗೆ ಮರಣದ ಭಯವಿಲ್ಲ।

ಒರಿದೆ ಮಾತೇ ಇಲ್ಲ ಸಿರಿಹಯವದನನ್ನ।
ಕರದು ಮುಕ್ತಿಯ ನಿತ್ತು ಅನುಗಾಲಸಲಹುವ ೧

ಮಟ್ಟ ತಾಳ

ಆವ ಧ್ರುವನ ನೋಡಿ ಸುರಲೋಕವಲಿ।
ಭೂ ವಿಭೀಷಣನ ನೋಡಿರಯ್ಯಾ।
ಅವನಿ ಕೆಳಗೆ ಬಲಿಯುತ್ಸವ ನೋಡಿ।
ಈ ಹಯವದನನ್ನ ಭಜಕರೆ ಸಾಕ್ಷಿ ೨

ತ್ರಿವಿಡಿತಾಳ

ಹತ್ತಾವ ತೆರದಿ ಭಕುತರ ಭಯವೆಲ್ಲ।
ಕಿತ್ತಿ ಭಕುತರ ಕಾಯ್ವ ಕಥೆಯ ಕೇಳಿರಯ್ಯಾ।
ಮತ್ತಾರು ತೋರಿರೈ ಭೃತ್ಯರೆಂಬಸುಗಳಿಗೆ।
ಹೆತ್ತ ತಾಯಿ ಎಂಬ ವಾರುತಿ ಕೇಳಯ್ಯಾ।
ಕರ್ತು ಹಯವದನನು ಭವವೆಂಬ ಕತ್ತಲೆ।
ಬತ್ತಿಪ ರವಿಯೆಂದು ಚಿತ್ತದಲೆನೆರೆನಂಬೂ ೩

ಅಟ್ಟತಾಳ

ದ್ರೌಪದಿ ಭಯವ ಪರಿಹರಿ ಸಿದರಾರೈ।
ಆ ಪರಿಕ್ಷಿತನ ರಕ್ಷಿಸಿದವನಾರೈ।
ತಾಪಸ ರೊಡಿಯ ಶ್ರೀಪತಿ ಹಯವದನನು।
ತಾಪಂಗಳನು ಕಳೆದು ತರ್ಕೈಸಿಕೊಂಬ ೪

ಆದಿ ತಾಳ

ಕರಿಯ ಕಾಯ್ದವನ ಪಾದವ ನಂಬು।
ಗಿರಿಯ ಯೆತ್ತಿದವನ ಪಾದವ ನಂಬು।
ಉರಿಯ ನುಂಗಿದವನ ಪಾದವನನಂಬು।
ಪುರಹರ ನುಳುಹಿದವನ ನೆರೆ ನಂಬು ಕರಿ।
ಸಿರಿ ಹಯವದನನ್ನ ಶರಣರಿಗೆ ಭಯವಿಲ್ಲ ೫

ಜತೆ

ಶ್ರೀ ರಮಣ ಹಯವದನನ್ನ ನಂಬಿದ।
ಸಾರಾ ಹೃದಯಂರಚರಣ ಸೇವೆ ಮಾಳ್ಪದೆ ಸಾಕ್ಷಿ ೬

## ಸುಳಾದಿ ೧೧.

ರಾಗ ಧ್ರುವ ತಾಳ

ಕಾಲು ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ।
ಮೌಳಿಯ ಮೇಲಾ ಜಲವ ಸತತ ಧರಿಸಿದನೊಬ್ಬ।
ಪಾಲಿಸುವ ಪ್ರಭು ಒಬ್ಬ ಕೊಲುವ ತಳವಾರನೊಬ್ಬ।
ಮೂಲೋಕ ದೊಡೆಯ ಪುಟ್ಟಿಸಿದ ಪಿತನೊಬ್ಬ।
ಆಲೋಚನೆಯಾ ಬಲ್ಲವರಿಗೆ ಸಂಶಯ ಸಲ್ಲ।
ಮಾಲೆಯನು ಮಹಾಲಕ್ಷ್ಮೀ ಹಯವದನ ಗಿತ್ತಳಾಗಿ ೧

ಮಟ್ಟತಾಳ

ರಾವಣನ ಕೊಂದ ಪಾಪವ ಕಳೆಯಬೇಕೆಂದು।
ದೇವ ರಘುಪತಿಯು ಸದಾಶಿವನ ಪೂಜಿಸಿದಗಡ।
ಅವಿಧಿಯ ನೊಂದು ತಲೆಯನು ಕಡಿದ ಮಾತ್ರದಲಿ।
ಆವಾಗ ಕರದಲಿಹ ಕಪಾಲವ ಕಾಣಾನೆ।
ಆವರೊಳು ಪೊಗಹಳುವ ದಾವಾತ ಭಜಿಸುವನೆ।
ಜೀವರಿಗುಳ್ಳಷ್ಟು ವಿವೇಕ ಹಯವದನಿಗಿಲ್ಲವೆ ೨

ತ್ರಿವಿಡಿ ತಾಳ

ರಾಮಾಯಣದ ಕಥೆಯು ಮಹಾಪುಣ್ಯ ಕಥೆಯು ಗಡ।
ರಾಮ ರಾವಣನ ಕೊಂದದು ಮಹಾಪಾಪಗಡ।
ಆ ಮನು ಮುನಿಗಳೆಲ್ಲ ಪಾಪ ಕಂಘಟಿಸಿದರೆ।
ಸ್ವಾಮಿಗೆ ಲಯಾ ಬೊಮ್ಮನ ಮೊದಲು ಕೊಲಿಸನೆ।
ಧೀಮಂತ ಹಯವದನ ಕೊಂದ ಹಿರಣ್ಯಕ ಮುಖ್ಯ।
ತಾಮಸದಿತಿಜರೆಲ್ಲ ಕಸ್ಯಪ ಋಷಿಯ ಸುತರಲ್ಲದೆ ೩

### ರೂಪಕ ತಾಳ

ಒಂದು ಕಡೆಯಲಿ ವಿಭೀಷಣನ ಪ್ರತಿಷ್ಟಿಸಿದ ವು।
ತ್ತೊಂದು ಕಡೆಯಲಿ ಸದಾಶಿವನ ಪೂಜಿಸಿದ ಇಂ।
ತೆಂದು ಪುರಾಣಗಳು ಕೂಗುತಲಿವೆ।
ತ್ರಾಸಿನೊಳು ಹೊನ್ನಿಗಿಸಿ ಸಮನೆಂದು ತೂಗಿ।
ತೋರುವಂದದಲಿ ಸಂದೇಹವಿಲ್ಲ ಹಯವದನ।
ರಘುಪತಿ ಇಬ್ಬರುಚಂದವ ಭಕುತರೆಂನುಸಲೆ ಸುಸ್ರಸಿಧ್ಧ ೪

### ಝುಂಪತಾಳ

ಶ್ರುತಿ ಇವನ "ಕರ್ಮಣಾ ನೋಕನೀಯ" ಯೆಂಬ
ತುತಿಸುತಿದೆ ನಿಮ್ಮ ನಿರ್ಗುಣ ಬೊಮ್ಮಕೆ ಕರ್ಮ ಉಂಟೆ।
ಕ್ಷಿತಿಯೊಳಗೆ ರಾವಣ ವಧೆ ಮಾಡಿದ।
ಸೇತು ಪತಿಯು ಪಾವನ ನೆನಲು ಆವನ ಕೊಂದವನ।
ಪತಿತ ಪಾವನ ನೆಂಬವು ಕುತ್ಸಿತಯುಕುತಿಯು ಮಾಡವೆ।
ಸತತ ಹಯವದನ ನೊಬ್ಬನೆಯಿದ್ದ ಕಾಣಿರೊ ೫

### ಧ್ರುವ ತಾಳ

ಸೇತುವೆಯು ಕಂಡ ನರರಿಗೆ ಬ್ರಹ್ಮ ಹತ್ಯ।
ಪಾತಕ ಕೆಡುವವೆಂದು ಶುತ್ರಿಯು ಮನ್ನಿಸಿತಾ।
ಖ್ಯಾತ ಬೊಮ್ಮನ ತಲೆಯು ಕಡಿಯೆ ಕರದಲಿ ಕೊಟ್ಟ ರಾಪ।
ತಪ್ಪದೊ ಸುಕೃತಿ ಸೇತು ಮುಖದಿಂದ।
ಸೀತೆ ಯರಸನು ಶಿವನ ನಿಲಿಸಿ ಪ್ರತಿಷ್ಟಿಸಿದ ಜಗ।
ನಾಥ ಹಯವದನ ಭಕುತರ ಬಂಧು ಕಾಣಿರೊ ೬

### ಮಟ್ಟತಾಳ

ವರವ ಶೋಧಿಪೆನೆಂದುಕರವ ತನ್ನ।
ಶಿರ ಮೇಲಿರಿಸ ಬಂದ ಖಳಗಂಜಿ।
ಹರ ಸಕಲ ಸುರೇಶ್ವರರ ಅರಮನೆಗಳಿಗೆ ಪೋಗಿ ಐದಿ।
ಪರಿಹಾರವ ಕಾಣದೆ ನಮ್ಮ ಶಿರಿ,, ವರದನ ಮೊರೆ ಹೊಕ್ಕು
ಪ್ರಾಣವನು ಪೊರೆದಗಡ।

ಶರಣ ರಕ್ಷಕನೆಂದು ಬಿರಿದುಳ್ಳ ಹಯುವದನ।
ಪರಿಯಲ್ಲನೆ ಪಿರಿದೊಂದು ಪರದೈವವಿಲ್ಲವಯ್ಯ ೭

ರೂಪಕ ತಾಳ

ಮೂಲ ರೂಪದ ಸುರರು ದ್ವಾರಕಾಪುರಿಯ ಯಾತ್ರಿಯಲಿ।
ಪಾಲಸಾಗರ ಯಾತ್ರೆ ಗರ್ಭಯಾತ್ರೆ ಕೇಳಯ್ಯಾ।
ಶೂಲಧರ ಖಳಗಂಜಿ ಭುವನವೆಲ್ಲವ ಸುತ್ತಿ।
ಶ್ರೀಲೋಲನಿಹ ವೈಕುಂಠಯಾತ್ರೆಯಿಂದ ಬದುಕನೆ।
ಭೂ ಲೋಕದಲಿ ಪುಟ್ಟಿ ಹಯುವದನ ಕೃಷ್ಣ ಮಾಡಿದ।
ಕೈಲಾಸ ಯಾತ್ರೆ ಕೈವಲ್ಯಪತಿ ಗೆಲಿಗೆ ೮

ಝಂಪ ತಾಳ

ಯಾತ್ರೆಯು ಮಾಡಿಸಿಕೊಂಡ ಹರ ಹರಿ ಯಾನಹರಾಗಿ ಯು।
ಕುತಿ ಬಾಧಕವಾಯಿತು ಹರಿ ಹರರೊಳೈಕ್ಯ।
ಚಿತ್ರ ನಿನ್ನ ಮತಕೆ ನೀನೆ ಶತ್ರುವಾದೆಯ್ಯಾ।
ಜಾತಿತ್ಯುತ್ತರವ ಪೇಳೆ ಅಪಜಯುವು ಬಾರದಿಹದೆ।
ಮತ್ತೆ ನೆನೆಯೆ ಹಯುವದನಗಿದು ಲೀಲೆಯಾದರೆ।
ಸತ್ವ ಹೆಚ್ಚಿತು ಸರ್ವೋತ್ತಮನೆಂಬ ಶ್ರುತಿಗೆ। ೯

ತ್ರಿಪುಟ ತಾಳ

"ವಂದವಾನಾಂ ಪಿತಾನಾಂ ಪ್ರತಿ ಪ್ರಮಾಣ"।
ವೆಂದು ರುದ್ರನ ಕೂಡೆ ಶ್ರುತಿಯು ಪೇಳಿತಾಗಿ।
ತಂದೆ ಮಕ್ಕಳ ಮನೆಗೆ ಹೋದಂತೆ ಮು।
ಕುಂದ ಬೊಮ್ಮನಿಗೆ ಹಿರಿಯತನ ಕೊಡಲೆಂದ।
ಮುಂದೆ ಜನಿಸುವ ಶ್ರೀಯ ಕುವರ ರೊಳು ತನ್ನ।
ಕಂದನನ ಸೃಜಿಸಿ ಹಯುವದನ ಚತುರನಲ್ಲವೆ। ೧೦

ಧ್ರುವತಾಳ

ಕಾಶಿಯಲಿ ರಾಮ ಮಂತ್ರೋಪದೇಶವ ಮಾಳ್ಪ।
ಈಶ ಛಾರಣ ಮತದಿ ಜಗಕೆ ಗುರುವೆಂತೆಂಬ।

ಆ ಶಿವನ ಮಂತ್ರ ತಾರಕ ಬೊಮ್ಮ ಯೆನಿಪ।
ವಾಸುದೇವನೆ ಜಗಕೆ ಪರದೈವ ಕಾಣಿರೊ ಎಂದು।
ಈ ಸುತತ್ವವ ಪೇಳ್ವ ಹರಗೆ ನಮ್ಮ ಹಯವದನ।
ಏಸು ಮನ್ನಣೆಯ ಮಾಡಿದರುಚಿತ ಕಾಣಿರೊ ೧೧

## ಮಟ್ಟ ತಾಳ

ರಾಮ ರಾಮೇತಿ ರಾಮೆ ರಮೆ ರಾಮೆ ಎಂಬ।
ಆ ಮಹಾದೇವ ಭಗವದ್ಭಕ್ತನಲ್ಲನೇ।
ಸ್ವಾಮಿ ತನ್ನ ಭೃತ್ಯರನು ಪ್ರತಿಷ್ಠೆಯನು ಮಾಡಿಸಿದ ನಿ।
ಸ್ಸೀಮ ಕರುಣಾಂಬುಧಿ ಮಹಾಮಹಿಮ ನೆಂಬರು।
ಭ್ರಾಮಕದ ನುಡಿಗೆ ಮರುಳಾಗದಿರು ಹಯವದನ।
ರಾಮಚಂದ್ರನೆ ಕಾಶಿಯ ತಾರಕ ಬೊಮ್ಮ ಕಾಣಿರೊ ೧೨

## ರೂಪಕ ತಾಳ

ರೋಮ ಕೋಟಿ ಲಿಂಗ ನೆನಿಸಿದ ಹನುಮನೊಂದೊಂದು।
ರೋಮ ರೋಮಕೆ ಕೋಟಿ ಕೋಟಿ ಶಿವರ ಮಾಡುವ ಶಕ್ತಿ
ಕಾಣಿರೊ।
ಆ ಮಹಾತ್ಮನು ತನ್ನ ಆಳ ಮಾಡಿ ನಡಕೊಂಡ।
ರಾಮಚಂದ್ರನೆ ಜಗಕೆ ಪರದೈವ ಕಾಣಿರೊ।
ಸ್ವಾಮಿ ಹಯವದನ ವೇದವ ತಂದು।
ಕಮಲ ಜನಕ ಮತವನಿತ್ತನಾಗಿ ಅವನೆ ಜಗದೊಡಿಯಾ ೧೩

## ಝಂಪ ತಾಳ

ನೂರು ರುದ್ರರು ಪೇಳೆ ಕಾರ್ಯವಾದರೇನವರ।
ಈರೇಳು ಜಗವ ಸಂಹರಿಸ ಲರಿಯರು ಗಡ।
ಕಾರ್ಯ ವಿಲ್ಲದ ಶಿವನ ಪೇಳೆ ಅದ್ವೈತ ಮತ।
ಹಾರಿ ಹೋಗದೆ ಬರಿದೆ ಹಲವು ಹಂಬಲಿಸದೆ।
ಶ್ರೀ ರಮಣ ಹಯವದನ ವಡಂಬಟ್ಟನಿಬ್ಬರ।
ದೂರ್ವ ಕಳಚಿದನೆಂದು ಪೂರ್ವದರ ನಂಬಿರೊ ೧೪

**ತ್ರಿವಿಡಿ ತಾಳ**

ಹರ ವಿರಿಂಚಿರಲ್ಲವೆಂದು ಹಿರಿಯರೆ ಮನ್ನಿಸಲಾಗಿ।
ಪರಮ ಸಿದ್ಧಾಂತ ಕೋವಿದ ಬುಧರೆಲ್ಲ।
ಶಿರಿ ಹಯವದನ ನಾರು ಪುರಾಣಗಳ ನೆಲೆ ಮಾಡಿರೊ ೧೫

**ಅಟ್ಟ ತಾಳ**

ಒಂದು ಬೊಮ್ಮ ಜಗತ್ತು ಒಂದು ಜೀವ ಜಂತು ಇಂತೆಂದು।
ಸಂದಸ್ಯದವರಿಗೆ ಹರಿ ಜಡನೊ।
ಮಂದಹಾಸ ಜಡನೊ ಮನಮುನಿಗಳೆಲ್ಲ ಜಡರೊ।
ಇಂಥ ಶಿವನ ವ್ಯೂಹಿಸಿಕೊಂಡು ವಾದಿಸುವರ।
ಹಿಂದೆ ಮುಂದರಿಯರೆಂದು ಹಯವದನ ನಗನೆ ೧೬

**ಆದಿ ತಾಳ**

ಎಂ ಬ್ರಹ್ಮಾ ವೇದಾಂ ನೆಂಬ ಶ್ರುತಿ ಬ್ರಹ್ಮನಾ ಶ್ರುತಿ।
ಶಬ್ದ ಬ್ರಹ್ಮನೆಂಬ ವೇದ ಬೋಧಿಸಿ ತಾಗಿ।
ಇಂಥ ಮನುಜರಿಗೆ ಸದ್ಭಾವನ ಪೇಳ್ವ।
ಹೊಂದಿ ಬದುಕು ಹಯವದನನ್ನ ಚರಣವ।
ಹೊಂದಿ ಬದುಕೊ ಹರಿಯೆ ನಾನೆನ್ನ ಬೇಡ ೧೬

## ಸುಳಾದಿ ೧ (೧-೨)

### ಪ್ರಸನ್ನ ಹಯವದನ

**ರಾಗ** **ಧ್ರುವತಾಳ**

ಸಲಹಯ್ಯಾ ಕರುಣಿ ಸಕಲ ದೇವರ ಸಾರ್ವಭೌಮ
ಶುಭ ವೆಂಕಟರಮಣ ಸುಜನರ ಪಾಲನ
ಬಲವಂತ ಖಳ ಕುಲ ಭಂಜನ ನಿರಂಜನ
ಜಲಜ ನಯನ ಪ್ರಸನ್ನ ಹಯವದನ ೧

**ರಾಗ ದೇಶ** **ಮಟ್ಟ ತಾಳ**

ದೇಶ ದೇಶದಿಂದ ಬಂದ ಜನರ
ಆಶೆಗಳನು ಪೂರೈಸಿ ವಾಸುದೇವ ನಿನ್ನ ಭಜಕರದಾನಿಸಿ...

ಭಾಸುರ ಭರಣ ಸಂಪನ್ನ .
ಶೇಷಗಿರಿವಾಸ ತಿಮ್ಮಾ ಪ್ರಸನ್ನ ಹಯವದನ ೨

**ರಾಗ ಕಾಂಬೋದಿ** **ರೂಪಕ ತಾಳ**

ಜನಾ ಜನಕರ ಕಾಯ್ವನೆಂಬೋದು ನಿನ್ನಯ ಬಿರಿದು
ದಾನಿಗಳರಸ ಗಜೇಂದ್ರ ಗೊಲಿದು
ನಾಣಾದೆ ಅವನಾರ್ತಿಯವನು ಪರಿಹರಿಸಿದೆ
ಶ್ರೀನಾಥ ಭಜಕರ ಬಂಧು ಕರುಣಾಸಿಂಧು
ಧಾನಿಗಳರಸ ವೆಂಕಟರಮಣ ನೀ ಎನ್ನ
ನಾನಾಕ್ಲೇಶ ವಳಿದು ರಕ್ಷಿಸಿಕೋ ಪ್ರಸನ್ನ ಹಯವದನ
ದೀನ ಜನರ ಕಾಯ್ವನೆಂಬುದು ನಿನ್ನ ಬಿರಿದು ೩

**ರಾಗ ಭೈರವಿ** **ಝಂಪಾ ತಾಳ**

ಮುನಿದಿಂದ್ರ ಮಳೆಗರೆಯಲು ಗೋಪಾ ಗೋಪಿಯರು
ವನಜಾಕ್ಷವೇನೆಂಬೆ ಯಾಗಲು ಗಿರಿಯನ್ನು ಧರಿಸಿ
ಘನತರ ಕಾರಣದಿಂ ಭಜಕರನು ಪೊರೆದಯ್ಯಾ
ಇನಿ ಭವ ದಟ್ಟಳಿಯನು ಬಿಡಿಸೆನ್ನ ಸೇವೆಯೊಳು
ನೆನೆವಂತೆ ಮಾಡೊ ಶೇಷಗಿರಿವಾಸ ಪ್ರ
ಸನ್ನ ಹಯವದನ ಮುನಿ ಮಳೆ ೪

**ರಾಗ ಶಂಕರಾಭರಣ** **ತ್ರಿಪುಟ ತಾಳ**

ಹಿಂದೆ ನಾನಾ ಭವದಲ್ಲಿ ಬಂದು ನೊಂದೆ ನಾನು
ಇಂದಿರಾರಮಣ ನಿನ್ನ ಬಕುತಿಯು ನೊಲಿದಿತ್ತು ಮು
ಕುಂದ ಮುನಿಜನ ಮಾನ್ಯ ಮನ್ಮಥಕೋಟಿ ಲಾವಣ್ಯ
ವೆಂಕಟಾಚಲ ನಿನ್ನ ಭಕುತಿಯು ನೊಲಿದಿತ್ತು ಪ್ರಸನ್ನಹಯವದನ ೫

**ರಾಗ ತೋಡಿ, ವರಾಳಿ** **ಅಟ್ಟ ತಾಳ**

ಅನಾಥ ಜನಪ್ರಿಯ ಅಖಿಳ ಜಗದೊಡಿಯ
ಭಾನು ಸನ್ನಿಭಕಾಯ ಶೇಷಗಿರಿ ತಿಮ್ಮರಾಯ

ಶ್ರೀನಿವಾಸ ನಿನ್ನ ಮೂರುತಿಯ ಮನದೊಳು
ನೆನೆವಂತೆ ಪ್ರಸನ್ನ ಹಯವದನ ಮೂರುತಿಯ ೬

ರಾಗ ಶಾಕವರಾಳಿ ಆದಿ ತಾಳ

ಸಾಳಂ(ರಂ)ಗ ದೇವ ನಿನ್ನ ದಿವ್ಯ ಮೂರುತಿಯ
ಕರುಣಾರ್ಣವದಿಂದೆ ತೋರಿಸೊ ಕಾಯಜನಯ್ಯ
ಭಕುತರ ಪ್ರಿಯ ಕಾಯಜನಯ್ಯಾ
ಇವಕಾವ ದುರಿತವ ಪರಿಹರಿಸಿದೆ
ಪ್ರಭಾವ ವೆಂಕಟಚಲ ನಿವಾಸ ಕಾಯಜನಯ್ಯನೆ
ಭಕುತರಯ್ಯಾ ಪ್ರಸನ್ನ ಹಯವದನ ೭

ಜತೆ

ದೇನಿ ಪ್ರಸನ್ನಗಾದ್ರಿವಾಸ ಪಾಲಿಸೊ ಪರಮ ಪುರುಷ ಪರೇ
ಶನೆ ತನ್ನ ನೆನೆವರ ಹೊರವನನುದಿನಾ ಪ್ರಸನ್ನ ಹಯವದನನೆ ೮

ಈ ಸುಳಾದಿ ಶ್ರೀ ಸ್ವಾದಿ ಗುರುರಾಜರದೋ
ಅಥವಾ ಅವರ ಶಿಷ್ಯರದೋ ವಿಚಾರಾಂಶವಿದೆ.

## ಸುಳಾದಿ ೧೩ ವಿಜಯೀಂದ್ರರಾಮ

### ಶ್ರೀ ವಿಜಯಿಂದ್ರ ಸ್ವಾಮಿಗಳು ಮಾಡಿದ ಸುಳಾದಿ

ರಾಗ ಧ್ರುವತಾಳ

ಯಾಕೆಲ ಮನವೆ ನೀ ಎನ್ನ ಕೀಕಟ ದೇಶಕ್ಕೆ ಶಳದು ಇಂದು।
ಲೋಕೈಕನಾಥ ಹರಿಯ ಪಾದಕೆನ್ನನು ದೂರನ ಮಾಡಿ ಇಂದು ಮಾ।
ಯಕ್ಕೆಲ ಜಿಹ್ವೆ ಲೋಕ ವಾರ್ತೆಗಳ ಸೇವಿಸದು।
ಶ್ರೀಕಾಂತನ ವಾರುತಿ ನುಡಿಸಿದಂತೆ ಮಾಡಿದಯ್ಯಾ।
ಯಾಕೆಲಕಿವಿಯೆ ಪ್ರೋಕರ ಆಲಾಪಗಳ ಕೇಳಿ ಕೆಡದೀ।
ಯಾಕೆಲ ಕಣ್ಣೆ ಪರವಧುಗಳ ಆಲೋಕಿಸಿ ಎನ್ನನು ಬಯಸಿದಿ।
ಸಾಕು ಸಾಕು ನಿಮ್ಮ ಸಂಗತಿ ಎಂಬಂತೆ ನೀ ಮಾಡಿದಿ।
ಕಾಕು ಮಾಡದೆನ್ನ ಸಿರಿ ವಿಜಯಿಂದ್ರಿರಾಮನ್ನ ಅಗಲಿಸಿದಿರಿ ೧

### ಮಟ್ಟತಾಳ

ಹರಿಚಿಂತನ ನಾಮ ಮೂರುತಿ ಕೀರುತಿಗಳ।
ವಿರಚಿಸಿ ಸವಿಯುದ ನೋಡದ ಕೇಳದ।
ಕರಣಗಳಿದ್ದೆಡೆ ಇಲ್ಲದಿದ್ದಡೇ ನೊ।
ಹರಿಗೆ ಸನ್ಮುಖವಾಗದ ಕಾರಣ।
ಕರಣಂಗಳ ಶಿರವಳಿವ ದೊಳಿತೊ।
ಸಿರಿ ವಿಜಯಿಂದ್ರ ರಾಮನಲ್ಲ ದನ್ಯ ವಿಷಯ।
ಕ್ಕೆರಗುವ ಕರಣಂಗಳ ಶಿರವರಿವದ್ದೊಳಿತೊ ೨

### ರೂಪಕತಾಳ

ಮನುಮಥ ನಯ್ಯನಕಿಂತ ಕಡು ಚಲ್ವನಾವನೊ।
ವನಜ ಭವನ ತಂದೆಕಿಂತ ದೇವರೊಳದಾವನೊ।
ಮುನಿ ಮನಕೆ ಗೋಚರನಾಗಿ ತೋರಿ ತೋರನು ದಾವನೊ।
ಘನ ವಿಜಯಿಂದ್ರ ಶಾಮ ಪೊರೆಯಿಲೆಮ್ಮನುದಿನ ೩

### ಝಂಪತಾಳ

ನಿನ್ನ ಕೀರುತಿ ಕಿವಿಗೆ ನಾಮ ಎನ್ನ ನಾಲಿಗೆ।
ಎನ್ನ ಕಣ್ಣಿಗೆ ನಿನ್ನ ಮೂರ್ತಿ ದೊರೆಯಲಿ॥
ಎನ್ನ ಮನಕೆ ಸೇವ ಸಿರಿ ವಿಜಯಿಂದ್ರ ರಾಮ।
ಎನ್ನ ಕಣ್ಣಿಗೆ ನೀ ನನ್ನ ಮೂರ್ತಿ ದೊರೆಯಲಿ ೪

### ತ್ರಿವಿಡಿ ತಾಳ

ಮೂರೇಳು ಕರಣಂಗಳಿರೇ ನೀವು।
ಸಿರಿ ಪತಿಗೆ ದೂರರಾಗಿ ನರಕಯಾತನೆ ಗೈದದೆ।
ಹರುಷಗುಂದಲಿ ಲೇಸಾದೆ।
ಸುರೇಶ ಮೊದಲಾಗಿ ಅರ್ಚಿಪ ಪರಮ ಪಾವನಾ ಚರಣ
ಶ್ರೀ ಗರುವ ದೇವರ ದೇವನ।
ಸಿರಿ ವಿಜಯಿಂದ್ರರಾಮ ಪೊರೆಯಲಿಮ್ಮನುದಿನ ೫

**ಅಟ್ಟತಾಳ**

ತಪ್ಪನೊಪ್ಪನರಸನು ತನ್ನ ಸೆರೆ ನಂಬಿದ।
ಶ್ರೀಪತಿ ಅಜಮಿಳ ಸುರಪತಿ ಮುಖರ।
ತಪ್ಪು ಮಾಡಿದವರ ತಪ್ಪು ಹಿಡಿದನೆ ಎ।
ಸಪ್ಪ ಶ್ರೀ ವಿಜಯೀಂದ್ರ ರಾಮ ದಯಾನಿಧೆ ||೬||

**ಆದಿತಾಳ**

ನಾರಾಯಣನೆಂಬ ನಾಗನ ಕರಿಯಲಾಗ।
ಆರತನಾಗಿ ಅವಾತಕರದನೆಂದು ಆ
ದರ ದಿಂದಲಿ ಕೇಳಿ ಅಜಾಮಿಳನ।
ಭೂರಿ ಭೀತಿಗಳು ಕ್ಷಣದಿ ಬಿಡಿಸನೆ।
ಸಾರ ಹೃದಯ ನೆಂದರಿದರೆ ಬಿಡುವನೆ।
ಮಾರಮಣ ಸಿರಿ ವಿಜಯೀಂದ್ರರಾಮ।

**ಜತೆ**

ಸಾಧುಗಳನ ಸಂತತ ಸಲಹುವ ಸು।
ಬೋಧ ಮೂರುತಿ ಸಿರಿ ವಿಜಯೀಂದ್ರರಾಮ ||೮||

## ವಿಜಯೀಂದ್ರರಾಮ (೨)

## ಸುಳಾದಿ ೧೪

### ಶ್ರೀರಾಮಚಂದ್ರ ದೇವರ ಮಹಾಮಹತ್ಮೆ

**ರಾಗ ನಾಟ** **ಧ್ರುವತಾಳ**

ಪರಬೊಮ್ಮ ಹರಿಯು ತಾ ನರ ರೂಪ ತಾಳಿಹ
ನರನಾಥ ದಶರಥನ್ನವರ ಗೇಹದಲವತರಿಸಿ
ಸಿರಿರಾಮ ನೆಂಬೊ ಪುಣ್ಯನಾಮದಿಂದ ಕರೆವುತಿರೆ
ಹರುಷದಿಂದ ಇಲ್ಲಿಗೈದಿ ಕರಿಯಬಂದ ಕೌಶಿಕನ್ನ
ಗುರು ಯಜ್ಞ ವಿಘ್ನವನ್ನು ಪರಿಹರಿಸುವ ಮುನಿವರನ
ಕರುಣದಿಂದ ಪರಮಾನಂದ ಶರಧಿಯಲ್ಲೋಲ್ಯಾಡಿಸಿದ
ಸಿರಿ ವಿಜಯೀಂದ್ರ ರಾಮ ಪೊರೆಯಲಿಮ್ಮ ನಾಮವ
ಹಾಹಾ ಎಲೆ ರಮಣಾ ೧

**ಮಟ್ಟತಾಳ**

ಈತನೆಂದು ಯಜ್ಞದ ವಿಘ್ನ ಪರಿಹರಿಸುವ
ಪ್ರೀತ ಮಹದ್ಭೂತ ದಂತಿಹ ರಕ್ಕಸರ
ವೀತ ಭಯನಾಗಿ ಪೊರೆವವೆಂತೊ
ಪ್ರೀತ ಮಹದ್ಭೂತ ದಂತಿಹ ರಕ್ಕಸರ
ಭೂತಳಕರ್ತಸಿರಿ ವಿಜಯಿಂದ್ರ ರಾಮನಚರಿತ
ಪ್ರೀತ ಮಹದ್ಭೂತದಂತಿಹ ರಕ್ಕಸರ ವೀತಭಯ
ನಾಗಿ ಪೊರೆವದೆಂತೂ ೨

**ರೂಪಕತಾಳ**

ಜನಕನಂದು ಜನಪತಿಯು
ಮನಿಗೆ ಪೋಗಿ ಜಾನಕಿಯು
ಮನಕೆ ಹರುಷ ಬಪ್ಪಂತೆ
ಅಣಕವಾಗಿ ಶಿವನ
ಧನುವು ಮುರಿದು ವಿಜಯಿಂದ್ರ ರಾಮ
ಮನಕೆ ಹರುಷ ಬಪ್ಪಂತೆ ೩

**ಝಂಪಿತಾಳ**

ಇವನರ್ಭಕನೆ ಇವನ ಮುನಿಗಳಾದವರೆಲ್ಲ
ಮನದಿ ಭಾವಿಸಿ ಕಾಣನೆಂಬದರಿಯಾ
ಭುವನ ಪಾವನ ನಾಮ ಸಿರಿ ವಿಜಯಿಂದ್ರರಾಮ
ಇವನರ್ಭಕನೆ ಇವನ ಮುನಿಗಳಾದವರೆ ೪

**ತ್ರಿವಿಡಿತಾಳ**

ರಾಮ ಜಾನಕಿ ಮದುವೆಯ ಆಗಿ ಬಾವಾಗ ಪರುಶ
ರಾಮನ ದರಸ ಅವನಖಿಲ ಹೆದರಿಸಿ ಮೆರೆದೆ
ಕೋಮಲಾಂಗ ವಿಜಯಿಂದ್ರ ರಾಮ ಬಾಲಕನೆ–
ಹೇಗೆ ಹೆದರಿಸಿದಾ ೫

**ಅಟ್ಟತಾಳ**

ನಸಲಲ್ಲಿ ಕಣ್ಣು ಪಡದವನ ಗೆಲಿದೆ
ಆಸುಳೆಯೆಂದು ಬೇಡಿಕೊಂಡ ಕಂದನ ಕಾಯ್ದೆ

ಉಸರ ಬೇಕೆಂದು ಪವಣ (ಪಣವ) ಮಾಡಿದನ
ಆಸುಳಿ ಯೆಂದ ಸುರರ ಪೊರೆವೆ ವಿಜಯಿಂದ್ರ ರಾಮು
ಆಸುಳಿ ಯೆಂದು ಬೇಡಿಕೊಂಡ ಕಂದನ ಕಾಯ್ದೆ ನರಹರಿ ೬

ಆದಿ ತಾಳ

ಉರವಣಿಸಿ ಬಾಹ ತಾಟಿಕಿಯು ಕೈ
ಕರಗಳ ನಿಮಿಷದಿ ಕತ್ತರಿಸುವೆನೆಂದು
ಸುರರ ಪೊರೆವ ವಿಜಯಿಂದ್ರ ರಾಮು
ನರಹರಿ ಕರಗಳ ನಿಮಿಷದಿ ಕತ್ತರಿಸುವೆ ನೆಂದಾ ೭

ಜತೆ

ಲೋಕಾಭಿರಾಮು ಶುಭಗುಣ ಭೌಮು
ಲೋಕೇಶ ಭೌಮು ವಿಜಯಿಂದ್ರ ರಾಮು ೭

ಸುಳಾದಿ ೧೫

ವೈಕುಂಠ ವಿಠ್ಠಲ (ಬೇಲಾಪುರ ವೈಕುಂಠದಾಸರು)

ರಾಗ ಧ್ರುವತಾಳ

ನೋಡಲಿ ಮನವೆ ಜಗದೀಶನ ಲಾವಣ್ಯಾಂಬುಧಿಯನನುದಿನ
ಬೇಡು ಬೇಡಿದ ನೊಲಿದೀವ ದಾಸಿಗಳರಸನಾ
ಕೂಡೆಲ ಮನನೆ ಸುಖನಿಧಿಯು ಅಜಭವೇಂದ್ರಾದಿ ಸುರೇಶ
ಕೇಡಿಲ್ಲದ ನಿಜಪದ ಆವನೊಲವೆ
ಆಡಾತನ ದಾಸರೊಡನೆ ದುರಿತ ಕೋಟಿಗಳನು ನೀಗೆ
ರೂಢಿಗೆ ದಕ್ಷಣ ವಾರಣಾಸಿ ಎನಿಪ ಬೇಲಾಪುರದಲ್ಲಿ
ಗಾಡಿಕಾರ ಚನ್ನಕನಾದ ವೈಕುಂಠ ವಿಠ್ಠಲ್ಲ ಅ.ಆ,ಆ,ಆ ಬಂದೈಧಾನೆ

ಮಟ್ಟತಾಳ

ಮೆರೆವ ಮುಕುಟ ಮುತ್ತಿನ ಮೂಗುತಿ
ಕರ್ನದೊಳು ನಿರುಪಮ ರತ್ನದೋಲೆರಾಜಿತ
ವರದಾ ಕರ ಚತುಷ್ಟಯದಲ್ಲಿ ಶಂಖ ಚಕ್ರಗದೆ

ಸರಸಿಜ ಸಂಕೃತಿಯು ಪೀತಾಂಬರದಾ
ಸಿರಿ ವೈಕುಂಠ ವಿಠ್ಠಲ ಬೇಲಾಪುರದ
ಕರುಣಾಕರ ಕೇಶವ ನಿನ್ನ ಮಹಿಮೆಗೆ ನಮೊ ನಮೊ ೨

**ರೂಪಕ ತಾಳ**

ಕಮಲಜಾರಾಧಿತಾಂಘ್ರಿ। ಕಮಲಾ ಆರಾಧಿತಾಂಘ್ರಿ
ಕಮಲಾ ಕುಚ ಕುಂಕಮಾಂಕಿತ ಪದ
ಅಮರ ನದಿಯು ಪಡೆದ ಚರಣ ಕಂಜ
ಅಮಿತ ಮಹಿಮ ಎನ್ನ ದೇಹ ಮನಿಯೊಳಗನುದಿನ ನಿಲಿಸಯ್ಯ
ನಮೋ ಬೇಲಾಪುರದ ಚನ್ನಕೇಶವ ವೈಕುಂಠ ವಿಠ್ಠಲಾ
ಅಮಿತ ಮಹಿಮ ಎನ್ನ ದೇಹ ಮನಿಯೊಳನುದಿನ ನಿಲಿಸಯ್ಯಾ ೩

**ಝಂಪಿ ತಾಳ**

ನಿನ್ನ ಕೀರುತಿ ಕಿವಿಗೆ ನಾಮ
ಎನ್ನ ನಾಲಿಗೆ ಚಾರು ಲಾವಣ್ಯ
ಎನ್ನ ಕಣ್ಣಿಗೆ ಆ ಅ ಇದೆ ಸಾರವಯ್ಯಾ
ಸಿರಿ ವೈಕುಂಠ ವಿಠ್ಠಲ ಬೇಲಾಪುರಧೀಶಚಾರು ಲಾವಣ್ಯ ೪

**ತ್ರಿವಿಡಿ ತಾಳ**

ಸರಸಿಜೋದ್ಭವ ಶೂಲಿ ಸುರಪ ಮುಖ್ಯ
ಸುರಾಸುರರು ಶರಧಿ ಮಥನದಲ್ಲಿ ನೆರದಿರಲು
ಪರಮ ಪುರುಷ ಪುರುಷೋತ್ತಮನೆಂದು ಅಂದು ಇಂದಿರೆ
ಹರುಷದಿ ಮಾಲೆ ನಿನಗೆ ಹಾಕಿದಳಾಗಿ
ಪರಮ ಪುರುಷ ವೈಕುಂಠ ವಿಠ್ಠಲ ಎಂದು ಇಂದಿರೆ ೫

**ಅಟ್ಟತಾಳ**

ಅಲ್ಪಮತಿಯು ನಾನೆತ್ತ ಸ್ವಾಮಿ ನಿನ್ನ ಮಹಿಮೆ ಎತ್ತ
ಶ್ರೀಪತಿಯೆ ನಿನ್ನ ಮಹಿಮೆ ಎತ್ತ
ಬಲುಪಾಪಿ ದುರ್ವಿಷಯ ಲಂಪಟನು ನಾನು ನಿನ್ನ ಮಹಿಮೆ ಎತ್ತ
ಬೇಲೂರ ಪತಿ ಚೆನ್ನಕೇಶವ ವೈಕುಂಠ ವಿಠ್ಠಲ ಶ್ರೀಪತಿಯೇ ೬

**ಆದಿತಾಳ**

ಶರಣಾಗತ ಪರಿಪಾಲಕನೆಂಬ
ಬಿರಿದು ಕೇಳಿ ನಿನ್ನಯ ಸಿರಚರಣಕ್ಕೆ
ಶರಣ ಪೊಕ್ಕನೊ ಎನ್ನವ ಗುಣ ಅಪರಾಧ
ಮರೆಯೊ ಶ್ರೀ ವೈಕುಂಠ ವಿಠ್ಠಲ
ಕರುಣಾಕರ ಕೇಶವ ನಿನ್ನ
ಮೂರುತಿಗೆ ನಮೊ ನಮೊ ೭

**ಜತೆ**

ಸಿರಿ ವೈಕುಂಠ ವಿಠ್ಠಲ ಬೇಲಾಪುರಧೀಶ
ಕರುಣಾಕರ ಕೇಶವ ನಿನ್ನ ಮಹಿಮೆಗೆ ನಮೊ ನಮೊ ೮

ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು

---

ನೋಟು—ಶ್ರೀ ಪಾದರಾಜರವು, ಶ್ರೀವ್ಯಾಸರಾಜರು, ಶ್ರೀ ಸ್ವಾದಿರಾಜರು, ಶ್ರೀ ವಿಜಯಿಂದ್ರರವು ಆದ್ಯರೂ ಶ್ರೀ ಪುರಂದರದಾಸರವು ದೊರೆತ ಉಗಾಭೋಗಗಳೆಲ್ಲಿ ವಿಷಯವಿಭಾಗ ಮಾಡಿ ಶ್ರೀ ಹರಿದಾಸ ಭಾರತಿ ಬೆಂಗಳೂರಿಗೆ ಕಳಿಸಿದೆ. ೨೫೦ ಸುಮಾರು ಹರಿದಾಸ ಭಾರತಿಯಲ್ಲಿ ಪ್ರಕಟವಾಗಿವೆ. ಅವರು ಸಂಗ್ರಹಿಸಿ ಕೊಟ್ಟ ನಮ್ಮ ಮಂಡಲದ ಹೆಸರು ಸಹ ಕೊಟ್ಟಿಲ್ಲ. ಆಗಲಿ—ಪ್ರಕಟವಾದರೆ ಸಾಕು. ಮೇಲ್ಕಾಣಿಸಿದವರ ಪದಗಳನ್ನೆಲ್ಲ ಸುಳಾದಿಗಳು ಮುಗಿದಿಂದ ಕೊಡಲಾಗುತ್ತದೆ. ಸಂಶೋಧನ ಕೆಲಸ ನಡೆಡಿದೆ. ಕೆಲ ಪದ ಎರಡನೆಯ ಕಡೆಗೆ ಅಚ್ಚಾದವುಗಳಲ್ಲಿ ಬಹಳ ತಪ್ಪುಗಳಿವೆ. ಮುಂದೆ ಆದ್ಯರ ಸುಳಾದಿಳು ಕೊಡುತ್ತದೆ.



**ಬೆಹಾಗ್ ಛಾಪು ತಾಳ**

ವಾಸುದೇವನಾಶ್ರಯಿಸ ಉಪಾಸನ್ಯಾಕತೆ
ಧ್ಯಾಸ ಬಲಿಯದಿಹ ಮಿಗಿಲಭ್ಯಾಸವ್ಯಾತಕೆ

ಎಂಬ ಪಲ್ಲವಿಯನ್ನು ಪದರ್ಭವಾಗಿಟ್ಟು ಐದು ನುಡಿಗಳ ಕೆಳಕಂಡ ಪದವನ್ನು ಹಾಡಿರುತ್ತಾರೆ. (ಮಹಿಪತಿದಾಸರು)

ಹೃದಯಶುದ್ಧವಾಗದೆ ಉದಯಸ್ನಾನವ್ಯಾತಕೆ
ಬದಿಯಲಿಹ ಸುವಸ್ತು ಕಾಣದ ಜ್ಞಾನವ್ಯಾತಕೆ
ಉದಗಕುದಿಯು ಶಾಂತಿಹೊಂದದ ಸಾಧನವ್ಯಾತಕೆ
ಬುಧರ ಸೇವೆಗೊದಗದಲಿಹ ಸ್ವಧನವ್ಯಾತಕೆ ೧

ಭಾವನೆಲೆಯುಗೊಳ್ಳದಲಿಹ ಭಕುತಿಯಾತಕೆ
ಕಾವನಯ್ಯನ ಕಾಣದಲಿಹ ಯುಕುತಿಯಾತಕೆ
ದೇವದೇವನ ಸೇರ್ಗೊಲ್ಲದ ಶಕುತಿಯಾತಕೆ
ಹೇವಹೆಮ್ಮೆಯಳಿಯದಲಿಹ ವಿರಕ್ತಿಯೇತಕೆ ೨

ತತ್ವದನೆಲೆ ತಿಳಿಯದಿಹ ವಿದ್ವತ್ವವೇತಕೆ
ಸತ್ವಗುಣ ವಿಚಾರವಿಲ್ಲದಿಹ ಕವಿತ್ವವೇತಕೆ
ಚಿತ್ತಶುದ್ಧವಾಗದಿಹ ಮಹತ್ವವೇತಕೆ
ವಿತ್ತದಾಶೆತೊರೆಯದ ಸಿದ್ಧಿಯೇತಕೆ ೩

ನೀತಿಮಾರ್ಗವರಿಯದವನ ರೀತಿಯೇತಕೆ
ಮಾತಿನಮಿತಿಯಿಲ್ಲದವನ ಪ್ರೀತಿಯೆತಕೆ
ರೀತಿ ಆದರವಿಲ್ಲದಮೃತ ಊಟವೇತಕೆ
ಜ್ಯೋತಿ ತನ್ನೊಳರಿಯದ ಯತಿತ್ವವೇತಕೆ ೪

ಮನವು ಸ್ಥಿರಗೊಳ್ಳದವನ ಶ್ರವಣವೇತಕೆ
ನೆನೆವು ನೆಲೆಗೊಳ್ಳದಿದ್ದರೆ ಮನನವೇತಕೆ
ತನುವಿನಲ್ಲಿ ಘನವ ಕಾಣದ ಅನುಭವ್ಯಾತಕೆ
ದಾನಿ ಮಹೀಪತಿಸ್ವಾಮಿಯ ಕಾಣದ ಜನ್ಮವೇತಕೆ ೫

# ಪದ್ಯ ವಿಭಾಗ ೧

## ಆದ್ಯರ ಸುಳಾದಿಗಳು

೬೦ ಜನ ಆದ್ಯರು ಪುರಾತನ ದಾಸರು. ಇವರೇ ವಿಶೇಷವಾಗಿ ದಾಸ ಸಾಹಿತ್ಯವನ್ನು ಮೊದಲಿಗೆ ಬೀರಿದವರೆಂಬುದಕ್ಕೆ ಇವರಿಗೆ ಆದ್ಯರೆಂಬ ನಾಮ ಬಂದಿದೆ. ಇವರು ಒಮ್ಮೇಲೆ ಒಂದೇಕಾಲಬಲ್ಲಿ ಇದ್ದರೆಂತಲೂ, ಕ್ರಮವಾಗಿ ಒಬ್ಬರಿಂದೊಬ್ಬರು ಆಗಿ ಹೋದರೆಂತಲೂ ಇತಿಹಾಸ. ಇವರು ಶ್ರೀಪುರಂದರ ದಾಸರಕಿಂತಲೂ ಮೊದಲಿಗೇವೆ ಇದ್ದರೆಂದು ಶ್ರೀ ವಿಜಯದಾಸರ ಸುಳಾದಿಯಿಂದ ಗೊತ್ತಾಗುತ್ತದೆ. ಅನೇ ಶತಮಾನದವರಲ್ಲ. ಶ್ರೀ ಜಯ ತೀರ್ಥರ ಕಾಲದನಂತರ ಶ್ರೀಪಾದ ರಾಜಾದಿಗಳಿಗಿಂತಲೂ ಮೊದಲಿಗಿರಬಹು ದೆಂಬ ಊಹೆ ಯಾಕಂದರೆ ಶ್ರೀ ಪುರಂದರದಾಸರ ಕಾಲ ಶ್ರೀ ವ್ಯಾಸರಾಜರ ಕಾಲ, ಶ್ರೀಪಾದರಾಜರಕಾಲ ಸ್ವಲ್ಪ ಹೆಚ್ಚು ಕಡಿಮೆ ಇದೆ.

೬. ಶ್ರೀ ವಿಜಯದಾಸರು "ಆವಜನುಮದಲಿ ಸ್ನಾನ ಮಾಡಿದೆನೊ" ಎಂಬುವ ಸುಳಾದಿಯ ಮಟ್ಟತಾಳದಲ್ಲಿ ಹೇಳಿರುವದೇನಂದರೆ—

"ನರಸಿಂಹ ವೈಕುಂಠ ನರಹರಿಯೋಗೇಂದ್ರ ।
ಸಿರಿಸೊಬಗು ಸುಲಭ ವರದ ಅಚಲಾನಂದ ।
ಅರವಿಂದನಾಭ ಹರಿ ವ್ಯಾಸ ಕೃಷ್ಣ ವರ ದಾನಿ ಚನ್ನ ।
ಗುರು ಅಚ್ಯುತ ಚತುರ ಮಧ್ವಪತಿ ।
ಗರುಡವಾಹನ ಮುದ್ದು ಪರಿಪೂರ್ಣಾನಂತದಾರಿಪನ ಶ್ರೀ ।
ಧರ ಪಾಂಡುರಂಗ ಚರಿತಾನಂದಾ ವಿ ।
ಸ್ತರವಾಗಿ ಬಲುಪರಿ ಪರಿಯಲಿ ಪೇಳಿ ಅಂಕಿತವ ।
ಸರಸವಾದ ಪೇಳಿ ಪರಮ ಭಕುತಿಯಲ್ಲಿ ವಿಜಯ ವಿಠ್ಠಲನ್ನ ।
ಸ್ಮರಣೆ ಮಾಡಿದರು ಆದ್ಯರು ನಿರ್ಮಳರಾಗಿ " ॥ ೨ ॥

**ತ್ರಿವಿಡಿ ತಾಳ**

ಇವರು ಈ ಪರಿಯಲ್ಲಿ ಅಂಕಿತವನು ಹಾಕಿ ।
ಅವನಿಯೊಳಗೆ ಸಂಚರಿಸುತ್ತಲಿರಲಿತ್ತಲು ।
ಭವದೂರರಾಗಿ ದಾಸರು ತಮ್ಮಸುತರೊಡ ।
ನೆ ವಿರಚಿಸಿದರು. ಪುರಂದರ ವರದ ಗುರು ಅಭಿ ।
ನವ ಗುರು ಮಧ್ವಪತಿ ಎಂಬಾಂಕಿತದಿಂದ ।
ವಿವರಣೆ ಮಾಡಿ ಲೋಕವನು ಉದ್ಧರಿಸೆ ।
ಅವರವರು ಎಲ್ಲಾ ಅತಿದಯಾಪರರಾಗಿ ।
ಭವಿಷ್ಯೋತ್ತರ ತಿಳಿದು ಎನಗೆ ಒಂದು ।
ಕವನಕ್ಕೆ ನೆಲೆ ಮಾಡಿ ಪೋಗಿದ್ದದದರಿಂದ ।
ಹವಣೆ ತಿಳಿದೆನೊಗುರುಗಳ ಕರುಣದಿಂದ ।
ಜವನ ಬಾಧೆಯ ಕಳೆವ ವಿಜಯವಿಠಲನ್ನ ।
ಅವಸರದಲಿನಾ ಚರಣವನಂಬಿದೆನೊ ॥ ೩ ॥

ಈ ಪ್ರಮಾಣದ ಮೇಲಿಂದ ಶ್ರೀ ಪುರಂದರ ದಾಸರಕಿಂತಲೂ ಆದ್ಯರು ಮೊದಲಿಗಿದ್ದರೆಂದು ತಿಳಿಯುತ್ತದೆ. ಆದ್ಯರ ಪೈಕಿ ಒಬ್ಬ ದಾಸರು ಶ್ರೀ ಜಯತೀರ್ಥರ ಸ್ತೋತ್ರ ಮಾಡಿರುತ್ತಾರೆ. ಶ್ರೀ ಜಯತೀರ್ಥರ ಸಮಕಾಲೀನರಾಗಲಿ ಇತ್ತೀಚಿನವರಾಗಲಿ ಇರಬಹುದು. ಸಂಶೋಧನೆಯಲ್ಲಿ ಈ ಆದ್ಯರವು ಸುಮಾರು ೩೦ ಸುಳಾದಿ ೪೦ ಪದಗಳು. ಕೆಲವು ಉಗಾಭೋಗಗಳು ದೊರೆತಿವೆ. ಉಗಾಭೋಗಗಳು "ಹರಿದಾಸ ಭಾರತಿಯಲ್ಲಿ ಕೊಟ್ಟಿದೆ, ಈಗ ಅವರ ಸುಳಾದಿಗಳು ಮಾತ್ರ ಕೊಡುತ್ತದೆ.

**ಸಂಪಾದಕ**

# ಆದ್ಯರು

## ಅಚಲಾನಂದ ವಿಠಲ (೧)

### ಸುಳಾದಿ ೧

ರಾಗ ಧ್ರುವತಾಳ

ಘೋರ ಮಲ್ಲಿಗೆಯ ದುರುಬಿದ ಜೋಲೆಯಾದ ಕ
ಸ್ತೂರಿ ತಿಲಕ ನೊಸಲಿನೊಳೆಸೆಯೇ ।
ಹರಿಣಾಂಕನ ಹಳಿವ ನಗೆಮೊಗ ।
ವಾರಿಜಾದ್ಯ ಸಾಲು ಪೋಲುವ: ನಯನ ।
ಈ ರೇಳು ಭುವನವ ಬೆಳಗುವ ಮುಗುಟ ।
ಸೂರೇಯಾನಂತ ರತುನಮೋಲಿ ।
ಕೀರುತಿ ಭುಜಯುಗವಲಯಾದಿಗಳತೋಳು
ಬಂದಿ ಕಂಕಣಮುದ್ರಿಕಾ ಎಸೆಯೆ ।
ಪೇರುರದಲಿ ಒಪ್ಪೆ ಸಿರಿ ವತ್ಸಸಿರಿಗಂಧ ।
ಹಾರ ಪದಕ ವೈಜಯಂತಿ ವನಮಾಲೆ ಒಪ್ಪೆ ।
ವೀರ ಮಲ್ಲುಡಿಗೆಯದುರುಬಿನೂಟುಪೊದು ।
ದಾನ ಸುರರ ಪೆಂಡಿಯು ಬಲಗಾಲಿಲೊಲಿಯೆ ।
ಸೇರಿದವರಿಗೆ ಉನ್ನತಕೆ ಉನ್ನತವೀವ ।
ಧಾರುಣಿಯೊಳಗಚಲಾನಂದ ವಿಠ್ಠಲರೇಯಾ ॥ ೧ ॥

ಮಟ್ಟತಾಳ

ದೇವರೆಂದರೆ ಎಲ್ಲರ ದೇವರೇ ಕಾಣಿರೊ ।
ದೇವರೆಂದರೆ ಎಲ್ಲರ ದೇವರೇ ನೋಡಿರೊ ।
ಭಾವಿಸಿ ಬಂದು ನೋಡಿ ಬರಿದೆ ಕೆಡಬೇಡಿ ।
ದೇವರೆ ಚಲುವ ನಮ್ಮ ದೇವರೆ ಸೊಬಗಾ ।
ದೇವರೆ ಶಕಲ ಸುಖವಕ್ಕು ಕಾಣಿರೊ ।
ದೇವರ ಬಿಟ್ಟನ್ಯರ್ದೇವರ ಭಜಿಸಿದರೆ । ನೀ ।
ವ್ಯಥೆ ಬಟ್ಟಿರೊ ಅಚಲಾನಂದ ವಿಠ್ಠಲರೇಯ ದೇವರೇಸಾಕ್ಷಿ ॥ ೨ ॥

ತ್ರಿವಿಡಿತಾಳ

ಜಲಧಿಯೊಳಿದ್ದ ಶಿಶುಗಳ ಜಲವಾಹದಿಂದ ತೆಗುವಂತೆ ಸಂಸಾರಿ
ನರಮಗನ ಸಂಸಾರಿಯಾಗಿ ಉದ್ಧರಿಸುವ ಸಂಸಾರಿ ।
ಸಂಸಾರಿ ನರಮಗನ ದೇವ ನಂದನ ದೇವಕಿ ।
ಸಿಖಾಮಣಿ ಕಾವೊದೆಮ್ಮ ಅಚಲಾನಂದ ವಿಠ್ಠಲರೇಯಾ ॥ ೩ ॥

ಅಟ್ಟತಾಳ

ಕಂಜ ಭವಾದಿ ಸುರರ ಮುಕುಟಮಣಿ ।
ಪುಂಜ ರಂಜಿತ ಪಾದ ಪೀಠ ಜಯದೇವಪಂಥ ।
ರಿರೇಯ ಜಯ ಪುಂಡರೀಕ ತನಯುನ ।
ಚಕೋರಚಂದ್ರ ಜಯ ನರಲೋಕದ ಪುಣ್ಯ ।
ಗಣ್ಯ ನಿರ್ವಿಣ್ಯ ಅಚಲಾನಂದ ವಿಠ್ಠಲದೇವರೇಯುಜಯ ॥ ೪ ॥

ಆದಿತಾಳ

ಪೊಡಲೊಡವಿಯು ನೆಚ್ಚಿಕೆಡದೇ ಮನವೆ ।
ನಡವದು ಹರಿಪಾದಗಳನು ಬಳಿ ।
ವಿಡಿ ಹರಿದಾಸರ ಪದವ್ರಜಗಳ ।
ನಡ ಕೆಡದ ಪದವನೀವ ಅಚಲಾನಂದ ವಿಠಲರೇಯನಡಾ ॥೫॥

ಜತೆ

ನೀ ಒಲಿದವರಿಗೇ ಅಚಲಾ ಪದವಿ ಅಕ್ಕು ।
ಅಚಲಾನಂದ ವಿಠ್ಠಲ ದೇವರೇ ನಮೋ ನಮೋ ॥ ೬ ॥

## ಬಾಲಲೀಲೆ ಸುಳಾದಿ (೨)

ರಾಗ ಧ್ರುವತಾಳ

ರಂಗಾ ನಿನ್ನ ಎಡದಂಗುಟದುಗುರುನು ।
ಸೋಂಕಿದ ಸುರನದಿ ಅನೇಕಾನೇಕ ।
ಲೋಕವು ತಾನೆ ಪಾವನ ಮಾಡುವಳೊ ।
ರಂಗಾ ನಿನ್ನ ನಾಭಿ ಕಮಲದಲ್ಯುದಿಸಿದ ವಿರಂಚಿ ।
ಅನೇಕಾನೇಕ ಲೋಕವು ತಾನೆ ಸೃಜಿಸಿದನೊ ।
ರಂಗಾ ನಿನ್ನುರವನೆ ಸೋಂಕಿದ ಮಹಲಕುಮಿ
ಅನೇಕಾನೇಕ ಭುವನ ಚಿನ್ನರಿಗತಿಸುಖವನೀವಳೊ ।

ರಂಗಾ ನಿನ್ನ ಒಂದೊಂದವಯುವ ಸೋಂಕಿದವರ
ಮಹಿಮೆಂತುಂಟೋ ।
ರಂಗಾ ನಿನ್ನ ಭಕುತರ ಮಹಿಮೆಗೆ ನಮೊನಮೊ ।
ಅಚಲಾನಂದ ವಿಠ್ಠಲ ಪಂಡರಿಪುರಿರಾಯಾ ॥ ೧ ॥

ಮಟ್ಟತಾಳ

ದಾಸರು ಬರಲಿಂಗೆ ಪೊಸರಿಸುವ ಇಂದ್ರಿ ।
ವೆಂಕ್ಕರು ಬರಲಿಂಗೆ ಶಂಕೆಗೊಂಬುವ ಚಂದಿರ ।
ಡಿಂಗರು ಬರಲಿಂಗೆ ಚೆಂಗು ಚರಿವರು ।
ದಿಕ್ಪಾಲಕರು ಹರಿಯ ಡಿಂಗರು ಬರಲಿಂಗೆ
ಚಂಗು ಚರಿವರು ಅಚಲಾನಂದ ವಿಟ್ಠಲರೇಯನ ।
ಸಜ್ಜಯಳಿಹ ಘನ ಅಧಿಕಾರವ ಕೆಡುವದೆಂದು ।
ದಾಸರು ಬರಲಿಂಗೆ ಪೊಸರಿಸುವ ಇಂದಾ ॥ ೨ ॥

ತ್ರಿವಿಡಿ ತಾಳ

ತಮ್ಮ ಮೂರುತಿಯಿಂದ ತಮ್ಮ ಕೀರುತಿಯಿಂದ ।
ತಮ್ಮ ತಮ್ಮ ಪ್ರಭಾವದಿಂದ ।
ತಮ್ಮ ಕರುಣವಲೋಕನದಿಂದ ।
ತಮು ತಮ್ಮ ದಾಸರ ಭುವನ ಪಾವನ ಮಾಡುವರು ।
ಅಚಲಾನಂದ ವಿಠಲರೇಯನ ಶಿರಿಚರಣದ ಶರಣರು ।
ಈ ಭುವನ ಪಾವನ ಮಾಡುವರೋ ॥ ೩ ॥

ಅಟ್ಟತಾಳ

ಬಯಿಸಿ ಬಳಲಿ ಕೃತುಸಾಧನ ಸತ್ಕರ್ಮವ ಮಾಡಿಕೊಂಡಂತೆಲ್ಲ-
ಈ ಪಥ ।
ಸಕಲ ಪುರುಷಾರ್ಥ ವ್ರತಸಿದ್ಧಿ ಎಂತೆಲ್ಲ ನಿನ್ನಾಳುತನವಲ್ಲ ।
ಘನ ಸಿರಿ ಅಲ್ಲವೊ ಬಯುಸದೆ ಬಳಲದೆ ದೊರಕುವ
ದಚಲಾನಂದ ವಿಠ್ಠಲನ ದಾಸರ ಕರುಣವು ಬಯುಸಿ ಬಳಲಿ ॥೪॥

ಆದಿತಾಳ

ಮನ ವಚನ ಕಾಯಕದಿಂದ ।
ಅನ್ಯವನರಿಯದ ಹನುಮಂತನ
ನಿನ್ನ ದಾಸ ನೆಂದೆನಿಸಯ್ಯಾ ।
ಉನ್ನತ ಭಕುತಿಯ ನಿತ್ಯನಗನುದಿನ ।
ನಿನ್ನವನೆಂದೆನಿಸೊ ಅಚಲಾನಂದವಿಠಲ ॥ ೫ ॥

ಜತೆ

ಹಿಂದೆ ಮಾಡಿದ ಇಂದು ಮಾಡಿದ
ಮುಂದೆ ಮಾಡುವ ತಪ್ಪುಗಳೆಲ್ಲ ನಿನ್ನ ನಾಮವು ।
ಒಂದೆಸಾರಿ ನೆನದೆ ಅಚಲಾನಂದ ವಿಠ್ಠಲ
ಹಿಂದೆ ಮಾಡಿ ಎಂದೂ ಮಾಡುವಾ ॥ ೬ ॥

## ಸುಳಾದಿ ೩

ರಾಗ- ಶಂಕರಾಭರಣ, ಧ್ರುವ ತಾಳ

ಕಾಮ ಕೆಂಗೆಡಿಸುತಲಿದೆ ಕ್ರೋಧ ಬಾಧಿಸುತಿದೆ ।
ಲೋಭ ಲಾಭವನ್ನರಿಯದಲಿದೆ ।
ಮೋಹ ಮುಂದುಗೆಡಿಸುತಿದೆ । ಮದ ಮುದವು ಬೀರೂತಿದೆ ।
ಮತ್ಸರವು ತುಚ್ಛನನ. ಮಾಡುತಿದೆ ।
ಏನು ಮಾಡಲಿ ದೇವನಾನಿದು ಬೇಡಿದರೆ ।
ನೀ ನಗುವೆ ನೇಮಿಸಲು ನೋಡಿ ನಗುವೆ ದೇವ ।
ಕಾಮ ಬಡವನ ಬಿಡಲು ಬಾರದೆ ।
ದೂರುವೆನೊ ಸ್ವಾಮಿ ಒಡೆಯಾ ।
ಬಿಡಿಸಯ್ಯಾ ಹಗೆಗಳ ಕಾಟವ ।
ಕೊಡು ನಿನ್ನ ಭಕುತಿ ಸುಖವನು ।
ನಿನ್ನ ಭಕುತಜನರೊಡನಾಡಿಸಿದಚಲಾನಂದ ವಿಠಲ ।
ವಿಭುವೆ ಕಾಮವೆಂಬ ॥ ೧ ॥

ಮಟ್ಟತಾಳ

ಹೆಜ್ಜೆ ಹೆಜ್ಜೆಗೆ ಗೋವಿಂದ ಎಂದೆನದಾ ।

ಲಜ್ಜೆಗೆಟ್ಟ ಪಾಪಿಗೆ ನಿತ್ಯ ನರಕಾ ।
ಲಜ್ಜೆಯನಳಿದ ಮಹಾತ್ಮಗೆ ಹರಿಪಾ ।
ದಾಬ್ಜದ ಮಕರಂದವನು ಸೇವಿಪನು ।
ಸಜ್ಜನ ಪ್ರೀಯ ಅಚಲಾನಂದ ವಿಠ್ಠಲ ।
ಅರ್ಜುನಗೊಲಿದಂತೆವೊಲಿವನು ಕಾಣಿರೋ ॥ ೨ ॥

ತ್ರಿವಿಡಿ ತಾಳ

ಆರಾರ ಮನೆಗಳಿಗೆ ಹಾರೈಸಿ ಹೋದರೆ ।
ಆರೆನ್ನ ನುಡಿಸ್ಯಾರು ಇತ್ತ ಬಾರೆನ್ನ ನೀನೆತ್ತ ಸಾರುವೆ ।
ಹರಿಯೆ ಸುತ್ತುಮುತ್ತಿತು ಸಂ ।
ಸಾರಾಬ್ಧಿಯುಲೂದರೆ ಎತ್ತ ಸಾರುವೆ ಹರಿಯೆ ।
ಕತ್ತಲೆ ಗಟ್ಟಿತು ಕಂಗಾಣದೆ ಮುಗುಧಾನೆ ।
ಇತ್ತಲೈದ ಅಚಲಾನಂದ ವಿಠ್ಠಲ ಎತ್ತಸಾರುವೆ ॥ ೩ ॥

ಅಟ್ಟತಾಳ

ನಿನ್ನಡಿಂಗರಿಗನೆಂದುರಗ ಲುಂಡಿಗೆಯೊತ್ತಿ ।
ಇನ್ನು ಸಲಹದಿದ್ದರಾರು ಮೆಚ್ಚುವರಯ್ಯಾ ।
ಎನಗೆ ನಿನಗೆ ಆಚಾರ ವಿಚಾರ ।
ಇನ್ನು ನಿನ್ನ ಹಿಡಿದು ಬಿಡೆ ನೀ ಯಾರಿಗಾದರು ಹೇಳೊ ।
ಎನಗೆ ನಿನಗೆ ಆಚಾರ ವಿಚಾರ ।
ಎನ್ನ ಸಲಹದಿದ್ದರೆ ನಿನಗೆ ಭಕುತರಾಣೆ ।
ಎನ್ನೊಡೆಯ ಕೇಳೋ ಅಚಲಾನಂದ ವಿಠ್ಠಲಾ ॥ ೪ ॥

ಏಕತಾಳ

ತಪ್ಪಿಲ್ಲದೆ ಅವಗುಣವಿಲ್ಲದೆ ಅಯ್ಯ ।
ಒಬ್ಬರನೊಬ್ಬರ ಮೊರೆ ಹೋಗುವರೆ ದೇವ ।
ಮೊರೆ ಹೊಕ್ಕವರ ಕಾವನಲ್ಲದೆ ।
ಅಲ್ಲಿ ಕುಲಾಚಾರ ವಸ್ತು ಗುಣಾವಗುಣ ಗಣವನು ।
ಮೊರೆ ಹೊಕ್ಕವರಲಿ ಅರಸುವರೇ ।
ದುರಾಚಾರಿಯಾಗಿ ದುಃಖಭೀತನಾಗಿ ।

ಮೊರೆಹೊಕ್ಕೆ ಕಾಯೊ ಅಚಲಾನಂದ ವಿಠಲಾ ।
ಮೊರೆಹೊಕ್ಕವರಲಿ ಅರಸುವರೇ ॥ ೫ ॥

**ಸುಳಾದಿ ೪**

ರಾಗ- ವರಾಳಿ ಧ್ರುವತಾಳ

ಹಿಂದಣ ಜನ್ಮಜನ್ಮಾಂತರದಿ ಮಾಡಿದಘವ ।
ನಿವಾರಿಸುವವರು ನಿನ್ನ ದಾಸರು ।
ಇಂದೆನ್ನ ಕವಿವ ದುರಿತ ದುರ್ಜಯ ದುಃಖವ
ದೂರ ಓಡಿಸುವರು ನಿನ್ನ ದಾಸರು
ಮುಂದಣ ಪರಮಾನಂದ ಸುಖವನು ಅನವರತ
ಈವರು ನಿನ್ನ ದಾಸರು ।
ಎಂದುಇದಿಅಲ್ಲದಿದ್ದಡೆ ಜೀವಕಿನ್ನು ಬೇರೆ ಗತಿಯುಂಟೆ
-ನಿನ್ನರಿವಬಗೆ ಮು ।
ಕ್ಕೊಂದುಂಟೇ ಎಲೆ ದೇವ ನಿನ್ನದಾಸರೆ ಜಗಜ್ಜೀವನರಯ್ಯ ॥
ನಂದ ನಂದನ ನಿನ್ನವರೆ ಜೀವನ ಅಚಲಾ ।
ನಂದ ವಿಠಲರೇಯಾ ಬೇರೆ ಗತಿ ಮತ್ತುಂಟೆ ॥ ೧ ॥

ಮಟ್ಟತಾಳ

ಭೂತದಯಾಪರ ನರನಾಥ ದೇವತಿ ಎಂಬರು ।
ಭೂತಿ ವಿರೋಧ ಮಾಡಿ ಕೈಯ್ಯಾತು ಬೇಡುವ ದೈವವ
-ಸಾತ್ವಿಕವೆಂದು ಬಗೆವರು ಜನರು ।
ಭೂತಳದ ಮನುಜರು ಈ ನೀತಿ ಇನ್ನೇನೆಂಬೆನಯ್ಯಾ ಅಯ್ಯಾ ಅ।
ಜಾತ ಸಕಲ ದೇವರದಾತ ಅಚಲಾನಂದ ವಿಠ್ಠಲ ನೀನಿರುತಿರೆ ।
ಸಾತ್ವಿಕವೆಂದು ಅನ್ಯ ದೇವರ ಈ ಭೂತಳದ ಜನರು ಬಗೆವರು
ಪ್ರತಿದಿನ ॥ ೨ ॥

ತ್ರಿವಿಡಿ ತಾಳ

ಕಬ್ಬಿಣ ತೋದು ಕಾಸಿ ಬಡಿದರೆ ಪರಸುತಾ ಸೋಕದೆ
ಸುವರ್ಣ (ನ್ನ) ಒಪ್ಪೋದೆ ।
ಅನಾದಿ ಅವಿದ್ಯಾ ಕಾಮ್ಯ ಕರ್ಮಗಳಿಂದ ।

ಬೆಂದರೆ ತಾಪದಿಂದ ನೊಂದರೆ ಹೋಹದೆ ಅನಾದಿ ।
ಅಚಲಾನಂದವಿಠ್ಠಲನ ಚರಣ ಶರಣರ ।
ಪರಶು ಪಾದಾಂಬುರುಹ ಸೋಕದನಕ ॥ ೩ ॥

ಅಟ್ಟ ತಾಳ

ಎನ್ನ ಹಳಿಯಲಿ ಜಗವು ಉಗಳಲಿ ಬಂಧುಗಳೆನ್ನ ।
ಮಾನಾ ರಂಗಾ ನಿನ್ನನೆ ನೆಚ್ಚಿಮೆಚ್ಚಿಹದೆನ್ನ ಮನ।
ಕೃಷ್ಣ ನಿನ್ನ ನಂಬಿಹದೆನ್ನ ಮನ ।
ಅಚಲಾನಂದ ವಿಠ್ಠಲ ನಿನ್ನವರೊಲಿಮೆಯ ಸಾರಿತೆನ್ನ ಮನ ॥೪॥

ಏಕತಾಳ

ಹಲವು ಮಾತೇನು ಹಲಧರನನುಜನ ।
ಚಲುವಿಕೆಯನು ಕಂಡು ಮನಸೋತೆನವ್ವ
ಚಲಿಸದು ಚಿತ್ತ ಚಂಚಲ ವಾಗದೆನ್ನಮನ ।
ಕೆಲಬಲದ ಕುಲದವರೆನ್ನ ಹಳಿಯಲೀ ।
ಬೆಲೆವಣ್ಣೆಲ್ಲ ತಾ ವಲುವಂತೆ ಮಾಡೀದ ।
ಸಿಲುಕಿದೆನಚಲಾನಂದವಿಠ್ಠಲಗೆ ।
ಕೆಲಬಲದ ಕುಲದವರೆನ್ನ ಹಳಿಯಲೀ ॥ ೫ ॥

ಜತೆ

ಬೆಂದಸಂಸಾರದಿ ಬಂದು ಬಂದು ನೊಂದೆನೊ ।
ಇಂದೆನ್ನ ಸಲಹೊ ಅಚಲಾನಂದ ವಿಠಲಾ ॥ ೬ ॥

# ಆದ್ಯರು ಮುದ್ದು ವಿಠಲ (೧)

## ಸುಳಾದಿ ೫

ರಾಗ- ಕಾಂಬೋದಿ ಧ್ರುವ ತಾಳ

ಸತ್ಯವಿದು ಹರಿಯು ಸದ್ಗುಣಗಳೆಂಬೋ ರಾಶಿ ।
ಸತ್ಯವಿದು ಜೀವ ಈಶ್ವರಗೆ ಭೇವ ।
ಸತ್ಯವಿದು ಜೀವರಿಗೆ ತಮ್ಮೊಳು ತಮಗೆ ಭೇದ ।
ಸತ್ಯವಿದು ಜಡ ಜೀವರಿಗೆ ಭೇದ ।
ಸತ್ಯವಿದು ಜಡಗಳಿಗೆ ತಮ್ಮೊಳು ತಮಗೆ ಭೇದ ।

ಸತ್ಯದದು ಜಡ ಈಶ್ವರಗೆ ಭೇದ ।
ಸತ್ಯವಿದು ಕಾಣಪಡವ ಈ ಪ್ರಪಂಚವು ।
ಸತ್ಯವಿದು ಸೃಷ್ಟಿ ಸ್ಥಿತಿ ಪ್ರಳಯವು ವ್ಯವಹಾರ।
ಸತ್ಯವಿದು ಪಂಚ ಭೇದಗಳೊಡನೆ ಕೂಡಿಹದು ।
ಸತ್ಯವಿದು ಹರಿಯನಂತಾವತಾರದೊಳೈಕ್ಯ ।
ಸತ್ಯವಿದು ಪ್ರತ್ಯಕ್ಷದಿ ಶ್ರುತಿವಾಕ್ಯಗಳನರಿತು ।
ಮಿಥ್ಯಾತಾನುಡಿವನು ನುಡಿಗಳನು ಜರಿದು ।
ತಥ್ಯದಿಂ ಮದನಗೋವಳ ಮುದ್ದುವಿಠ್ಠಲನ್ನ ।
ನಿತ್ಯ ನೀ ಭಜಿಸೆ ನಿತ್ಯಾನಂದ ಸುಖವೀವ || ೧ ||

ಮಟ್ಟ ತಾಳ

ದ್ವಾಸು ಪರ್ಣಾ ಸಯುಜಾಸಖಾಸಮಾನಂ ವೃಕ್ಷಂ ।
ಪರಿಷಸ್ವಜಾತೆ ತಯೋರನ್ಯಪಿಪ್ಪಲಸ್ವಾದತಿ ।
ಅಭಿಚಾಕಸೀತಿ, ಒಂದು ವೃಕ್ಷದಲೆರಡು ಕನಕಪಕ್ಷಿ ।
ಒಂದಾನೊಂದುಗಲವು ಕುಂದಣವಾಗಿಪ್ಪವು ।
ಒಂದು ಫಲಂಗಳನುಂಬೋದು ಮ!
ತ್ತೊಂದು ಫಲಂಗಳ ನುಣ್ಣದು ಆ ।
ನಂದ ಸಿಂಧು ಮುದ್ದು ವಿಠ್ಠಲನೆ ಪರದೈವ || ೨ ||

ತ್ರಿವಿಡಿ ತಾಳ

ಮಾಡುವನು ಹರಿಸಾಕ್ಷಿಯಾಗಿ ಜೀವರೊಳಿದ್ದು ।
ಮಾಡಿಸುವ ಪ್ರೇರಿಪಿ ತಾನೊಡೆಯನಾಗಿ ।
ಮಾಡಿದ ಸತ್ಕರ್ಮದಿಂದ ಪೂಜೆಯಗೊಂಡು ।
ನೀಡುವನು ಅವರ ಯೋಗ್ಯತೆ ತಕ್ಕ ಫಲವನ್ನು ।
ಬೇಡಿ ಭಜಿಸಿರೊ ನಮ್ಮ ಮುದ್ದು ವಿಠಲರೇಯಾ ।
ನಾಡಿನೊಳಗವನೆ ಜಗದೊಡೆಯ ಪರದೈವ || ೩ ||

ಅಟ್ಟತಾಳ

ಸಂತತ ಸಲಹೊ ಮಂಗಳಮಾಡಿ ।
ಕೃತ್ಸ್ನ ಚಾಂದರಾಯಣಂಗಳ ಚರಿಸಿದರಿನಿತಿಲ್ಲ ।
ಸಂತತ ಹರಿಯ ಸಂಕೀರ್ತನೆ ಲಕುಮಿಯ ।

ಕಾಂತನ ಸಂಪ್ರೀತಿಗಿದೆ ಕಾರಣವೈಯ್ಯಾ ।
ಕಂತು ಪಿತ ಮುದ್ದು ವಿಠ್ಠಲನ್ನ ನಾಮವ ।
ಭ್ರಾಂತನಾಗದೆ ಬಳಲದೆ ನೆನೆ ಮನವೆ ॥ ೪ ॥

ಆದಿತಾಳ

ನಾರಾಯಣ ನಿನ್ನ ನಾಮವೆ ನೆನೆಯದೆ ।
ಘೋರ ಸಂಸಾರ ಸಾಗರದೊಳು ಬಳಲಿದೆ ।
ಧೀರ ಅನಾಥರೊಡಿಯನೆ ಕರುಣಿಸೊ ।
ದುರಾಗ್ರಹದ ವಿಷಯದ ಬಾಧಿಗೆ ಆರಲಾರೆ ಆರಲಾರೆ ।
ಏರಿಸಿ ನಿನ್ನ ದಿವ್ಯನಾಮವೆಂಬೊನಾವಿಯ ।
ಸೇರಿಸು ನಿನ್ನವರೊಳು ಮುದ್ದು ವಿಠ್ಠಲರೇಯಾ ॥ ೫ ॥

ಜತೆ

ಶ್ರೀನಾಥನೆ ನಿನ್ನ ಭಕುತಿಯನ್ನೆ ಇತ್ತು ।
ಮನ್ನಿಸಿ ಕಾಯಲ ಮುದ್ದು ವಿಠ್ಠಲರೇಯಾ ॥ ೬ ॥

**ಸುಳಾದಿ ೬**

ರಾಗ ಧ್ರುವತಾಳ

ಆವನ ಭಯದಿಂದ ಮರುತಾ ತಿರುಗುತಿಪ್ಪಾ ।
ಆವನ ಭಯದಿಂದ ಇನನು ದಹಿಸುತಿಪ್ಪಾ ।
ಆವನ ಭಯದಿಂದ ಅಗ್ನಿ ಸರ್ವಭುಂಜಿಪಾ ।
ಆವನ ಭಯದಿಂದ ಮೃತ್ಯುಬಿಡದೆಕೊಲ್ಲುವಾ ।
ಆವನ ಆಜ್ಞದಿಂದ ಅನಂತಾನಂತವೇದಾ ।
ಸಾವಧಾನದಲಿಂದ ತುತಿಸುತಲಿಪ್ಪವೊ ।
ಆ ವಿಭುವೆ ನಮ್ಮ ಕಾವು ದೇವ ನೆಂದರಿದು ।
ಭಾವಿಸತಿ ಮನವೆ ಮುದ್ದು ವಿಠ್ಠಲನಾ ॥ ೧ ॥

ಮಟ್ಟತಾಳ

ಮೊದಲಿಗೆ ಉದಕವ ಯರಿಯೆ ತರುವತಾನೆ ।
ಒದಗಿ ಫಲಗಳಿಪ್ಪವು ತೊಂಬಗೆ ನೀರುಬ್ಬಿ ।
ಮುದದಿ ಆವನ ಪಾದ ಭಜನಿಯ ಮಾಡಲು ।

ಪ್ರಾಣಗಾಹುತಿ ನೀಯೆ ಇಂದ್ರಿಯಗಣದಂತೆ ।
ಉದರಪೋಷಣ ದೈವ ಮನದಣಿದಿಪ್ಪವೆ ।
ಆದಿ ಮಾರುತಿ ಮುದ್ದು ವಿಠಲನಿರುತಿರಲು ।
ಸಾಧಿಸಿ ಕಾಡಂಬಾದೈವದ ಘಸಣ್ಯಾಕೆ ॥ ೨ ॥

ತ್ರಿಪುಟತಾಳ

ಏಕಮೇವಾ ದ್ವಿತಿಯನೆಂದು ವೇದಪೇಳಲು ।
ಲೋಕದ ಜನರು ವಿವೇಕವನರಿಯದೆ ।
ತಾಕೆಡುತಲಿಪ್ಪರೋ ಲೋಕದ ಜನರು ।
ಆ ಕಮಲೋದ್ಭವ ಸುರಪತಿಸುರ ।
ನೀಕವಂದಿತ ಮುದ್ದು ವಿಠ್ಠಲರೇಯನ ।
ಶ್ರೀಕರ ಮೂರ್ತಿಯ ಭಜನೆಯನರಿಯದೆ ।
ತಾ ಕೆಡುತಲಿಪ್ಪರೋ ಲೋಕದ ಜನರು ॥ ೩ ॥

ಅಟ್ಟತಾಳ

ಬುದ್ಧಿಪೂರ್ವಕವಾಗಿ ಅನ್ಯ ದೇವತೆಗಳ ।
ಶ್ರದ್ಧೆಯಿಂದ ಅನುದಿನದಲಿ ಭಜಿಸಲು ।
ನಿದ್ರೆ ಗೈದವರ ಪಾದವ ತೊಳದಂತೆವೋ ।
ಬಿದ್ದು ಪೋಗುವೋವು ಅವರಿತ್ತ ಫಲಗಳ ।
ಭದ್ರಗತಿಗೆ ಸಾಧನವಾಗದು ನಮ್ಮ ।
ಮುದ್ದು ವಿಠ್ಠಲನ್ನ ಪಾದ ಕಮಲಗಳು ।
ಪೊದ್ದು ಬದುಕಲರಿಯದ ಪಾಪಿ ನರರಿಗೆ ।
ಉದ್ಧಾರಯಿಲ್ಲವೋ ಸಂಸಾರದಿಂದಾ ॥ ೪ ॥

ಆದಿತಾಳ

ಇಂದ್ರಿಯಗಳು ತಾವು ಬಂಧಿಸಿ ಎನ್ನನು ।
ಸಂದಿಸಿ ತಮ್ಮ ತಮ್ಮ ಗೊಂದಿಗೆಳವುತವೆ ।
ಮಂದರೋದ್ಧರ ಕೇಶವ ಬಂದುನೀ ಎನ್ನನು ।
ಚಂದದಿ ಪಾಲಿಸೊ ತಂದೆ ಮುದ್ದು ವಿಠ್ಠಲರೇಯಕರುಣಿ ।
ಮಂದರೋದ್ಧರ ಕೇಶವಾ ॥ ೫ ॥

ಜತೆ

ನೀನಲ್ಲದನ್ಯತ್ರ ದೈವಂಗಳೆನಗಿಲ್ಲಾ ।
ದೀನನಾಥ ಮುದ್ದುವಿಠ್ಠಲರೇಯಾ ॥ ೬ ॥

## ಮುದ್ದು ವಿಠಲ (೩)

### ಸುಳಾದಿ (೭)

ರಾಗ ಶಂಕರಾಭರಣ ಧ್ರುವ ತಾಳ

ಶ್ರೀರಮಣಿ ಕುಚಕುಂಕುಮಾಂಕಿತದ ಚರಣಗಂ ।
ಭೀರ ಸುಲಲಿತ (ಶುಭಾಂಗ) ಸು ಮಾಂಗದಲ್ಲೆಸವ ಚರಣ ।
ಧಾರುಣಿಯೆಲ್ಲ ಈರಡಿಯು ಮಾಡಿದ ಚರಣ ।
ಮೀರಿ ಲೋಕಗಳ ಖರ್ಪರ ಒಡೆದ ಚರಣ ।
ವಾರಿಜಾಸನನರ್ಘ್ಯ ಕೈಕೊಂಡ ಚರಣ ಭಾ ।
ಗೀರಥಿಯು ಪಡೆದ ನೆರೆ ಪರಮಪಾವನಚರಣ ।
ಸಾರಿದರಭೀಷ್ಟಗಳ ಪೂರೈಪ ಚರಣ ।
ಕಾರುಣ್ಯದಿಂದ ಭಕ್ತರ ಪೊರೆವ ಚರಣ ।
ಕಾರುಣ್ಯನಿಧಿ ಸಿರಿ ವೆಂಕಟಧೀಶ ಮುದ್ದು ವಿಠ್ಠಲ್ಲಾ ।
ಪಾರ ಮಹಿಮನೆ ನಿನ್ನ ಚರಣ ಪಾಲಿಸೊ ದೇವ ।
ಶ್ರೀರಮಣಿ ಕುಚಕುಂಕುಮಾಂಕಿತ ಚರಣ ॥ ೧ ॥

ಮಟ್ಟತಾಳ

ಮುನಿಶಾಪದಿ ಶಿಲಿಯಾಗಿದ್ದ ಅಹಲ್ಯಾದೇವಿಯ ।
ಕ್ಷಣ ಮಾತುರ ನಿಜ ಸತಿಯ ಮಾಡಿದ ಚರಣ ।
ಮುನಿಗಳ ಹೃತ್ಪದ್ಮದಲ್ಲಿಯಿಪ್ಪ ಚರಣ ।
ಹನುಮ ಸುಪರ್ಣರ ಕರಕಮಲದೊಳಿಪ್ಪ ಚರಣ ।
ಘನ ಮಹಿಮ ವೆಂಕಟಾಧೀಶ ಕರುಣಾಳೆ ಮುದ್ದುವಿಠಲ ।
ಅನುದಿನ ಎನ್ನ ಮನದಲ್ಲಿರಿಸೊ ನಿನ್ನ ಚರಣ ॥ ೨ ॥

ತ್ರಿವಿಡಿತಾಳ

ಬಾಲಕತನದಲ್ಲಿ ಭಂಡಿ ಮುರಿದ ಚರಣ ।
ಕಾಳಿಂಗನ ತುಳಿದು ನಾಗಗನ್ನಿಯರಿಗೆ ।

ತಾಳಿ ಭಾಗ್ಯವನಿತ್ತ ದಯಾಳು ನಿನ್ನ ಚರಣ ।
ನೀಲೋತ್ಪಲಶಾಮ ಶ್ರೀವೆಂಕಟಾಧೀಶ ಕರು ।
ಣಾಳಿ ಮುದ್ದು ವಿಠ್ಠಲ ಅಪ್ರಾಕೃತ ಚರಣ ॥ ೩ ॥

ಅಟ್ಟತಾಳ

ಧ್ವಜ ವಜ್ರಾಂಕುಶ ಯುವ ಪದುಮದಿಂದ ವೊಪ್ಪುವಚರಣ ।
ಗೆಜ್ಜೆ ಘಲು ಘಲುಕೆನೆ ಕುಣಿವ ಚರಣ ।
ಅಜಭವ ಸುರರು ಭಜಿಪ ಚರಣ ।
ವ್ರಜದ ಭೂಮಿಯನಲಂಕರಿಸುವ ಚರಣ ।
ತ್ರಿಜಗ ವಂದಿತ ವೆಂಕಟೇಶ ಮುದ್ದುವಿಠ್ಠಲ ।
ನಿಜಕರುಣಾಳು ನಿನ್ನ ಚರಣ ಪಾಲಿಸೊಸ್ವಾಮಿ ॥ ೪ ॥

ಏಕತಾಳ

ಚಂದಿರಾ ಬಿಂಬಾನಂತ ಕೋಟಿನಿಂದಿಪ ನಖ ।
ಚಂದ್ರಿಕೆ ಉಳ್ಳ ಚರಣ ।
ಕೆಂದಾವರಿಯ ಪೋಲುವ ದಿವ್ಯಚರಣ ಸುರ ।
ವೃಂದಗಳರ್ಚಿಸಿ ಸುಖಿಸುವ ಚರಣ ಕೃಪಾ ।
ಸಿಂಧು ಶ್ರೀ ವೆಂಕಟೇಶ ಮುದ್ದು ವಿಠ್ಠಲನೇ ।
ಇಂದೆನ್ನ ಮನದಿ ನಿಲ್ಲಿಸೊ ನಿನ್ನಯ ಚರಣ ॥ ೫ ॥

ಜತೆ

ಶ್ರೀರಮಣ ವೆಂಕಟಾಧೀಶ ಮುದ್ದುವಿಠ್ಠಲ ।
ಕರುಣಾಳುವೆ ನಿನ್ನ ಚರಣ ಪಾಲಿಸೊ ದೇವಾ ॥ ೬ ॥

# ಮುದ್ದು ವಿಠ್ಠಲ (೪)

## ಸುಳಾದಿ ೮

ರಾಗ- ನಾಟಿ ಧ್ರುವತಾಳ

ಮುಡಿಯು ಮುತ್ತಿನ ಜೊಲ್ಲೆಯುದ ಕಸ್ತೂರಿಯು ನಾಮು ।
ಪಿಡಿದೊಪ್ಪಿ ಉಡಿಯೆ ಪೀತಾಂಬರ ಎಸಿಯೆ ।
ಒಡಲು ಕುಂಕುಮ ಚಂದನದ ಕೇಸರ ಕುಸರುಗಳ ।

ತೊಡರುಗಳಿಸೆಯೆ ವೀರಕಡೆಯುಲೀಯೆ ।
ಎಡದ ಕರದಲ್ಲಿ ಚಾಪವನು ಪಿಡಿದುನಿಂದ ನೋಡೆ ।
ಪಿಡಿದು ಬಾಣವನು ಕರಕಮಲದಲ್ಲಿ ।
ಮಡದಿ ಲಕ್ಷುಮಿ ವಾಯು ಪುತ್ರರೊಡಗೂಡಿ ।
ಕಡು ಚನ್ನು ಮೆರೆವ ಸೋಜಿಗದ ದೇವನ ।
ಪಿಡಿದು ಮೆಲ್ಲಡಿಗಳನು ಬಿಡದೆನವ್ವ ಎನ್ನಪ್ರಾಣ ।
ಪ್ರಾಣ ದೊಡಿಯ ಶ್ರೀರಾಮುರಾಯ ಮುದ್ದುವಿಠಲನಾ ॥ ೧ ॥

ಮಟ್ಟತಾಳ

ಮರ್ತ್ಯನಂತೆ ನೀನು ಮರ್ತ್ಯಲೋಕದೊಳವತರಿಸಿ ಮಹ ।
ದೈತ್ಯರ ಸಂಹಾರ ಮಾಡಿದಗೆ ।
ನಿತ್ಯ ನಿರಂಜನಗೆ ಶಿಕ್ಷೆಯ ಮಾತುಗಳಿವು ।
ವಾರ್ತಿ ಅಲ್ಲದೆ ಪರಾರ್ಥವು ಕಾಣಿರೋ ತನ್ನ ।
ಕೀರ್ತನೆ ಮಾಡುವ ಪೊಲಿವಿಕೆ ರಾಮುಮುದ್ದುವಿಠ್ಠಲ ॥ ೨ ॥

ರೂಪಕತಾಳ

ಹರಿನಾಮ ಒಂದೆ ಏನಿತ್ತುಪಾರ ಕಾಣ ಮಾಡಲಿಲ್ಲ ।
ಪರಿಹರಿಸಲ್ಲಾಪದು ಹರಿಸಮವಾದಂಥದಿವ್ಯಕೋಲು ಸಾ ।
ಸಿರನಾಮಕ್ಕೆ ಸರಿಯಾಗಿಪ್ಪದು ರಾಮನಾಮ ಒಂದಯ್ಯಾ ।
ಸಿರಿರಾಮುರಾಯ ಮುದ್ದು ವಿಠಲನನಾಮದ ಮಹಿಮೆಯ।
ಗಿರೀಶ ಗೋವಿಂದ ವೇರಲ್ಲದೆ ಬಲ್ಲರೊಡನೆ ॥ ೩ ॥

ಝಂಪಿತಾಳ

ಒಂದು ಕಡೆಯಲಿ ಶಿವ.............. ಮ ।
ತ್ತೊಂದು ಕಡೆಯಲಿ ...........ಋಷಿಗಳನು ।
ಒಂದು ಕಡೆಯಲಿ ನೈದಿತು............ಸುರನ ಮ ।
ತ್ತೊಂದು ಕಡೆಯಲಿ ವೈದಿತ್ತು ಪೊರವಾ ।
ಇಂದಿರೆ ಗೂಡಿ ಸಾರ್ದನಂದಪುಷ್ಪಳಿ ಚಂದ ।
ಚಂದದಲಾಡಿ ಅಸುರ ಮೋಹಕನಾಗಿ ।
ಚಂದಾದಲ್ಲಿ ಸುರರಿಗಾನಂದ ಮರರಿಗೆ ।

ವೊಂದಲಾಡಿತ್ತೆ ಬೊಮ್ಮ ಮುದ್ದು ವಿಠ್ಠಲ ॥ ೪ ॥

ಏಕತಾಳ

ಆವ ದೇವಕ್ಕಳ ಸಲುಹಿದೆ ।
ಆವ ದೇವ ದಶ ಕಂಠನ ಮಡುಹಿದ ।
ಲಾವಕ ತನುಜಂಗೆ ಸ್ಥಿರ ಪದವಿಯನಿತ್ತು ।
ಆವಾವ ವಿಶ್ವರೂಪವ ತೋರಿಸಿ ।
ದೇವ ಸಮೋರಗ ವ್ಮೃಗಾದಿಗಳಿಗೆ ಪುಹಿಮೆ ।
ರಾಮರಾಯ ಮುದ್ದು ವಿಠ್ಠಲನಾ ॥ ೫ ॥

ಜತೆ

ಜಯಜಯ ಶ್ರೀರಾಮ ರಾಯ ಮುದ್ದು ವಿಠಲ ನಮೊ !
ಜಯ ಜಯ ಜಯತು ಶ್ರೀರಾಮನಾಮಾ ॥ ೬ ॥

## ಯೋಗೇಂದ್ರ ವಿಠಲ (೧)

### ಸುಳಾದಿ ೯

ರಾಗ ನಾಟಿ, ಧ್ರುವ ತಾಳ

ಭವವೆಂಬೊಗಜಕೆ ಪಂಚಾನನ ಹರಿನಾಮಾ
ಭವವೆಂಬೊಗಿರಿಗೆ ಕುಲಿಶವಯ್ಯಾ ।
ದುರಿತವೆಂಬಡವಿಗೆ ದಾವಾನಲ ಹರಿನಾಮ ।
ದುಃಖವೆಂಬೊಶರಧಿಗೆ ವಡವಾನಳ ।
ಸಂಸಾರವೆಂಬೊ ನದಿಗೆ ಹರಗೋಲು ಹರಿನಾಮ ।
ಬೇಡುವರಿಗೆ ಕಾಮಧೇನು ಹರಿನಾಮ ।
ಹರಿನಾಮ ಪಾಂಚಾಲಿಯ ಅಭಿಮಾನಕಾಯಿತು ।
ಹರಿನಾಮ ಪಟ್ಟವಗಟ್ಟಿತು ವಿಭೀಷಣಗೆ ।
ಹರಿನಾಮ ಅಜಮಿಳನ ಪಾತಕವಕೆಡಿಸಿ ।
ವೈಕುಂಠಕ್ಕೊಯ್ಯದೇ ಜಗವರಿಯೇ ।
ಹರಿನಾಮ ಪ್ರಲ್ಹಾದನ ಪರಿಪರಿ ಪಾಲಿಸಿತು ।
ಧ್ರುವ ವಿದುರನ್ನ ಉನ್ನತ ಮಾಡಿತು ।

ಮೃತ್ಯುವಿಗೆ ಮೃತ್ಯುಯೆನಿಸೋದು ಹರಿನಾಮು ।
ಮಹಾಪಾಪಕ್ಕೆ ಪ್ರಾಯಶ್ಚಿತ್ತವಯ್ಯಾ ।
ಯೋಗಿಂದ್ರ ವಿಠ್ಠಲನ್ನ ನಾಮುಭಕ್ತರಿಗೆ ವಜ್ರ ।
ಪಂಜರವಾಗಿ ಸುಖವೀವದಯ್ಯಾ ॥ ೧ ॥

ಮಟ್ಟ ತಾಳ

ಸಕಲ ಸಿದ್ಧಿಗಳ ನೀವುದು ಹರಿನಾಮು ।
ಮುಕುತರ ವೊಡನಾಡುತಿಪ್ಪುದು ಹರಿನಾಮು ।
ಕಕುಲಾತಿಯ ಬಿಡಿಸಿ ಪೊರೆವದು ಹರಿನಾಮು ।
ಲಕುಮಿರಮಣ ಶ್ರೀಯೋಗೇಂದ್ರ ವಿಠ್ಠಲನ್ನ ।
ಭಕುತರ ವೊಡನಾಡು ದುಃಸಂಗವಜರಿದು ।
ಸಕಲಸಿದ್ಧಿಗಳನ್ನೀವುದು ಹರಿನಾಮಾ ॥ ೨ ॥

ತ್ರಿವಿಡಿ ತಾಳ

ಜಾಗುಮಾಡದೆ ನಾಮಾಮೃತ ಉಂಡು ।
ರೋಗ ಪರಿಹಾರ ಮಾಡಿ ಕೊಳ್ಳಿರೋ ।
ಹಾಗ ಪತ್ತದು ವೇಳ್ಯ ಸವಿಯದು ।
ಲೋಗರಿಗೆ ಬಾಯಿ ತೆರಿಯಲಾಗದು ।
ಹೋಗಿ ವನದೊಳು ಹುಡಕಲಾಗದು ।
ಯೋಗೇಂದ್ರ ವಿಠ್ಠಲನ್ನ ನಾಮು ಔಷಧ ।
ಹೋಗಿ ವನದೊಳು ಹುಡುಕಲಾಗದು ॥ ೩ ॥

ಅಟ್ಟತಾಳ

ಅಂಜಲ್ಯಾತಕೆ ಪ್ರಾಣಿ ಹರಿನಾಮುವೆ ವಜ್ರ ।
ಪಂಜರವಾಗಿರೆ ಸುರಧೇನು ಕೈಸೇರಿ ।
ಎಂಜಲಿಗಾಸೆ ಹಾವಿನ ಭೀತೆ ಶೀ ಇರೆ ।
ಆಂಜನೆ ತನಯನ್ನ ಕರುಣದಿ ಸಲುಹಿದ ।
ಕಂಜಾಕ್ಷ ಯೋಗೇಂದ್ರ ವಿಠ್ಠಲನ್ನ ನಾಮು ।
ಎಂಜಲಿಗಾಸೆ ಹಾವಿನ ಭೀತಿಶೀ ಇರೆ ॥ ೪ ॥

ಏಕತಾಳ

ಕರಿ ಅಂಜುವದಂಕುಶಕ್ಕೆ ।

ಗಿರಿ ಅಂಜುವದು ಕುಲಿಶಕೆ ।
ತರಣಿ ಗಂಜುವದು ತಿಮಿರ ।
ಸಿರಿ ಯೋಗೇಂದ್ರ ವಿಠ್ಠಲನ್ನ ನಾಮಕ್ಕೆ ।
ಹರಿವದು ಪಂಚ ಮಹಾ ಪಾತಕ ।
ಕರಿ ಅಂಜವದಂಕುಶಕ್ಕೇ ॥ ೫ ॥

ಜತೆ

ನಾಮಾಮೃತವ ಸವಿದು ಧನ್ಯ ನಾಗೆಲೊ ಮನುಜ ।
ಧೀನುಂತರೊಡಿಯ ಯೋಗೇಂದ್ರ ವಿಠ್ಠಲವೊಲಿವಾ ॥ ೬ ॥

## ನರಕಂಠೀರವ ವಿಠಲ (೧)

### ಸುಳಾದಿ ೧೦

ಧ್ರುವ ತಾಳ

ಎನ್ನವಗುಣಗಳನು ಎಣಿಸದಲೆ ಎಲೋದೇವ ।
ಚನ್ನಾಗಿ ನೀನು ಸಲೆರಕ್ಷಿಸೆನ್ನ ।
ನಿನ್ನ ಗುಣಗಳನು ನೆನೆವಂತೆ ಮಾಡೆನ್ನ ।
ಮನಸಿಜನಯ್ಯ ನಿನ್ನವ ನೆನಿಸಿದೆ ।
ಅನಾಥ ಬಂಧುವೆ ನಿನ್ನ ನೆಂಬಿದೆ ನಾನು ।
ಪನ್ನಗ ಶಯನ ಪಾವನ್ನ ಮೂರುತೆ ।
ಮುನ್ನೆ ನಾ ಮಾಡಿದ ಕರ್ಮದ ಫಲದಿಂದ ।
ಎನ್ನ ಕಾಲನ್ನ ಬಳಿಯಲಿ ಪೋಗಿಸದೆ ।
ಎನ್ನ ಬೀದಿಯ ಬಾಲನ ಮಾಡಿ ಕೆಡಿಸದೆ ।
ನಿನ್ನ ಎಂಜಲನುಣಿಸಿ ಪೊರಿಯಬೇಕು ।
ನಿನ್ನ ತೊತ್ತು ತೊತ್ತು ಮಗನು ನಾ ।
ಎನ್ನ ಸಲಹಯ್ಯಾ ನರಕಂಠೀರವ ವಿಠ್ಠಲಾ ॥ ೧ ॥

ಮಟ್ಟ ತಾಳ

ಕುಲಾಲ* ಗುಳಿಯ ಕಿಚ್ಚಿನಂದದಲಿ ।

---

* ಕುಂಬಾರನ ತಗ್ಗಾದ ಆವಿಗೆ.

ಒಳಗೆ ಬೇವುತಲಿದೆ ದೇಹಪಿಕಾಂದ ।
ಕಳವಳಿಸುತ ಕಡು ವಿಷಯದ ಮದದಲ್ಲಿ ।
ತೊಳಲಿ ತೊಳಲಿ ಬೆಂಡಾಗಿ ಬಳಲಿದೆ ।
ನಳಿನ ನಾಭ ನರ ಕಂಠೀವ ವಿಠಲ ।
ಸುಲಭ ದೇವರ ದೇವ ಭಕುತರ ಕಾವಾ ॥ ೨ ॥

ತ್ರಿವಿಡಿ ತಾಳ

ಸುರ ತರುವು ಬಿಟ್ಟು ಬೊಬ್ಬಲು ನರಸುವ ।
ತಿರುಳನುಗಳಿದೆ ಬಚ್ಚಿಡುವ ।
ಬಳಲೂವ ಜೀವ ರಾಶಿಗಳಿಗೇನಂಜೇ ಧೀಮಂತ ।
.ನರಕಂಠೀರವವಿಠ್ಠಲನೇ ॥ ೩ ॥

ಅಟ್ಟತಾಳ

ಹೇಮಹಿತ್ತಾಳೆಯ ಬಣ್ಣವಂದೆ ಎಂಬ ।
ತಾಮಸ ಪಾಪಿ ಜೀವರ ಬುದ್ಧಿಗೇನಂಬೆ ।
ದೀಮಂತ ನರಕಂಠೀರವ ವಿಠ್ಠಲ ।
ಸೀಮೆ ಭಣಗು ದೈವಂಗಳು ಸರಿಯೇ ॥ ೪ ॥

ಆದಿತಾಳ

ಕರಚರಣಂಗಳು ತಲೆದೂಗದ ಮುನ್ನೆ ।
ಹರಿಯಾತ್ರೆ ಸೇವೆಲಿನಿರತನಾಗಿರಬೇಕು ।
ಪರಮ ಪುರುಷ ನರಕಂಠೀರವ ವಿಠ್ಠಲ ।
ಪೊರೆವನು ತನ್ನವ ನೆನೆ ಕರುಣದಲಿ ॥ ೫ ॥

# ಸೊಬಗು ವಿಠ್ಠಲ (೧)

## ಸುಳಾದಿ ೧೧

ರಾಗ ಸಾವೇರಿ ಧ್ರುವತಾಳ

ಗಿರಿಯ ಶಿಖರವನೇರಿ ತಲಿವೂರಿ ಬಹುಕಾಲ ।
ತರಗೆಲಿಯನ್ನೇ ಮೆದ್ದು ಜಪವನ್ನೇ ಮಾಡಿ ।
ಧರೆ ಎಲ್ಲವು ತಿರುಗಿ ಮಾಸೋಪವಾಸವಿದ್ದು ।

ಚರಿಸಿ ಚಂದ್ರಾಯಣವ ಚರುವನುಂಡು ।
ಪರಿಪರಿ ಆಶ್ರಮಂಗಳನೆಲ್ಲವು ಧರಿಸಿ ।
ಬೆರಳನೆಣಿಸುತ ಬೇಯ್ಬಬಿಸಲೊಳಿದ್ದು ।
ಬರಿದೆ ತನು ಬಳಲಿ ಧಾವತಿಗೊಂಡದೇನಹುದು ।
ಹರಿ ಪದದಿ ಮನ ವೆರಕವಿಲ್ಲದನಕ ।
ಪಿರಿದಾದ ಕೃತು ವ್ರತ ಜಪಗಳ ಮಾಡಿದ ಪುಣ್ಯ ।
ಬರಿದಾದ ಬಳಿಕ ಧರಿಗಿಳಿಯಬೇಕು ।
ವರದೊರದು ಶ್ರುತಿ ಸ್ಮೃತಿ ಪುರಾಣಗಳು ಪೇಳುತಿವೆ ।
ಸಿರಿ ಅರಸ ಸೊಬಗು ವಿಠ್ಠಲರೇಯನ ।
ಕರಣಶುದ್ಧನಾಗಿ ಮನಮುಟ್ಟಿ ನೆನವುದಕ್ಕೆ ।
ಸರಿಗಾಣೆ ಸರಿಗಾಣೇ ಸಂದೇಹವಿಲ್ಲಕೇಳಿ ॥ ೧ ॥

ಮಟ್ಟತಾಳ

ಶ್ವಾನನ ಕುನ್ನಿಯನು ಕೊಂಕಳವೊಳಗಿಟ್ಟು ।
ವಾರಣಾಸಿಯಲ್ಲಿ ಮುಳುಗುವ ತೆರದಂತೆ ।
ಮಾನವ ಕೇಳು ಮದ ಮತ್ಸರವ ಬಿಡದೆ ।
ಏನು ಮಾಡಿದರದು ವೃಥಾಯವಲ್ಲವೆ ।
ಹೀನ ಮನುಜರ ಸಂಗ ಏನು ಮಾಡಿದರದು ವೃಥಾಯವಲ್ಲವೆ ।
ದೀನನಾಥ ಸಿರಿ ಸೊಬಗು ವಿಠ್ಠಲನ್ನ ।
ಧ್ಯಾನದೊಳಿರೆ ಸಕಲ ಸಂಪದ ಬಪ್ಪದೋ ॥ ೨ ॥

ತ್ರಿವಿಡಿತಾಳ

ತನುವ ದಂಡಿಸಿ ಮನವ ಮರುಗಿಸಿ ।
ಅನುಪಮ ಹರಿಯ ಭಕುತಿಸುಧಿಯನು ।
ಅನುಭವವಿಲ್ಲದೆ ಅಲವಕರ್ಮಗಳೆನಿತು ಮಾಡಿದರೇನು
ಫಲವಯ್ಯಾ ।
ಘನ ಮಹಿಮ ಸಿರಿ ಸೊಬಗು ವಿಠ್ಠಲನ್ನ ।
ನೆನವೆ ಭವಗಿರಿ ಕುಲಶ ಕಾಣಿರೋ ॥ ೩ ॥

ಅಟ್ಟತಾಳ

ಪರಿಪರಿಯ ಪಾತಕ ಭವರೋಗಕ್ಕೆ ।
ನರಹರಿನಾಮ ದಿವ್ಯರಸಾಯನಕ್ಕೆ ।
ಅನುಪಮ ಮಾದ ಭಕ್ತಿ ಅನುಪಾನವನಿತ್ತು ।
ದುರಿತ ದೂರ ಸಿರಿಸೊಬಗು ವಿಠ್ಠಲನ್ನ ।
ಚರಣ ಸ್ಮರಣೆ ದುಃಖನಿವಾರಣ ಕಾಣಿರೋ ।
ಅನುಪಮಮಾದ ಭಕ್ತಿ ಅನುಪಾನವನಿತ್ತು ॥ ೪ ॥

ಆದಿತಾಳ

ಹರಿ ಹರಿ ಎಂದು ಬಾಹ್ಯರಂಗದಲ್ಲಿ ।
ಸ್ಮರಣೆ ಹೃದಯದೊಳಗಿನಿತಿಲ್ಲ ।
ಕರಣ ಶುದ್ಧಿ ಮುನ್ನಿನಿತಲ್ಲಾ ।
ಮರುಳತನದ ಬುದ್ಧಿನೋಡಿರಯ್ಯಯ್ಯಾ ।
ಸ್ಮರಣೆ ಹೃದಯದೊಳಗಿನಿತಿಲ್ಲಾ ।
ಕರಣ ಶುದ್ಧಿ ಮುನ್ನಿನಿತಿಲ್ಲಾ ।
ಪರಮ ಕರುಣಿ ಸಿರಿಸೊಬಗುವಿಠ್ಠಲನು ।
ನೆರೆನಂಬಿದವಗಲ್ಲದೊಲಿಯ ವೊಲಿಯುವಲಿಯಕಾಣಿರೊ ।
ಸ್ಮರಣೆ ಹೃದಯ ದೊಳಿನಿತಿಲ್ಲಾ ।
ಕರುಣ ಶುದ್ಧಿ ಮುನ್ನಿನಿತಿಲ್ಲಾ ॥ ೫ ॥

ಜತೆ

ಭಕುತಿ ಜ್ಞಾನವಿಲ್ಲದ ಭಕುತರಿಗೆ ಸುಲಭನೆ ।
ರುಕುಮಿಣಿ ಪತಿ ಸಿರಿಸೊಬಗು ವಿಠ್ಠಲನು ॥ ೬ ॥

# ಗರುಡವಾಹನ ಲಕ್ಷ್ಮೀನಾರಾಯಣ

## ಸುಳಾದಿ ೧೨

ರಾಗ ಧ್ರುವತಾಳ

ಎಲೆ ಮನ ಮೊದಲಾದ ಅಖಿಳ ಜ್ಞಾನೇಂದ್ರಿಯಂಗಳೆ ।
ಎಲೆ ವಾಗೇಂದ್ರಿಯಾದಿ ಸಕಲ ಕರ್ಮೇಂದ್ರಿಯಂಗಳೆ ।
ಎಲೆ ತತ್ವಾಭಿಮಾನಿ ಎನಿಪ ಸಾರ್ವಭೌಮರೆ ।

ಬಲಗೊಂಡು ಬೇಡಿಕೊಂಬೆ ದಯದಿಂದನುಗ್ರಹಿಸಿ ।
ಸಲಿಗೆ ಬಿನ್ನಪವನು ಸಲಿಸಬೇಕೆಲ್ಲ ನೀವು ।
ಸಲೆ ಕರುಣಾಮೃತದ ಶಲೆಗಳೈ ನೀವೆಲ್ಲರು ।
ಸುಲಭ ಗರುಡವಾಹನ ಲಕ್ಷ್ಮೀನಾರಾಯಣನ ।
ಲಲಿತ ಚಿತ್ತಾನುಸಾರ ನಡಿಸಿರೆಂದು ಪ್ರಾರ್ಥಿಸುವೆ ॥ ೧ ॥

ಮಟ್ಟತಾಳ

ಸ್ವರ್ಗವಾಗಲಿ ಆದು ಅಪವರ್ಗತನಾಗಲಿ ।
ಹರಿ ಚಿತ್ತಕ್ಕೆ ಬಾರದಿರೊಂದು ನಾನೊಲ್ಲೆ ।
ಶೆರೆಮನೆಯಾಗಲಿ ಅದು ನಿರಯ ಯಾತನಾಗಲಿ ।
ಪುರುಷೋತ್ತಮ ನೀ ನಿತ್ತದೆ ಪುರುಷಾರ್ಥವು ಎನಗೆ ।
ಗರುಡವಾಹನ ಲಕ್ಷ್ಮೀನಾರಾಯಣ ಚಿತ್ತಕ್ಕೆ ।
ನೆರೆ ಪ್ರತಿಕೂಲವಾದದ್ದು ಸಮ್ಮತವೆನಗೆ ॥ ೨ ॥

ರೂಪಕತಾಳ

ಶೆರೆಮನೆಯಲಿ ನಿರಯದಲಿಡಲುರಿಯಲ್ಲಿ ।
ಗಿರಿ ಜಲ ಸ್ಥಳದಲ್ಲಿ ಘೋರಹಿ ಮುಖದಲ್ಲಿ ।
ಅರಿಕುಲದ ಖಳರು ದುಷ್ಟೋಕ್ತಿಯಲಿ ಹಗ ।
ಲಿರಳು ಆರ್ಭಕನ ಜನನಿ ಸಲುಹುವಂತೆ ।
ಗರುಡವಾಹನ ಲಕ್ಷ್ಮೀನಾರಾಯಣಸ್ವಾಮಿ ।
ಪೊರೆವ ನಂಬಿದವರ ಸಂದೇಹ ಇನಿತಿಲ್ಲಾ ॥ ೩ ॥

ಝಂಪಿತಾಳ

ಸಿರಿಬೊಮ್ಮ ಮೊದಲಾದಖಿಳಸುರರಿಗೊಡೆಯ ।
ಕರುಣಾಬ್ಧಿ ಸಚ್ಚಿದಾನಂದ ರೂಪ ।
ಘನ ನಿಭ ಶ್ಯಾಮ ನಿಜ ಭಕ್ತ ಸಂರಕ್ಷಕ ।
ಪರಮ ಸ್ವತಂತ್ರ ಪರಮ ಸ್ವತಂತ್ರ ।
ಸರಸಿಜ ಭವಾಂಡದೊಳಹೊರಗೆ ಪ್ರತಿಕಲ್ಪಕ್ಕೊ ।
ಗರುಡವಾಹನ ಲಕ್ಷ್ಮೀನಾರಾಯಣಸ್ವಾಮಿ ।
ಪರಮ ಸ್ವತಂತ್ರ ಪರಮ ಸ್ವತಂತ್ರ ॥ ೪ ॥

ತ್ರಿವಿಡಿತಾಳ

ವರಣಾಶ್ರಮೋಚಿತ ನಿಖಿಳ ಕರ್ಮಶ್ರವಣಾ ।
ವಿರುಕತಿ ಭಕುತಿ ಶಮದಮಾದಿ, ಸಾಧನಗಳ ।
ನಿರುಪಾಧಿಕ ಮಾಡಿ ಹರಿಗೆ ಅರ್ಪಿಸು ಮನುಜ ।
ಬರಿದೆ ದುರ್ವಿಷಯಗಳ ಬಯಸಿ ನೀ ಬಳಲದೆ ।
ಗರುಡವಾಹನ ಲಕ್ಷ್ಮೀನಾರಾಯಣಸ್ವಾಮಿ ।
ಚರಿತೆಯ ಕೊಂಡಾಡು ಚಪಲಚಿತ್ತನಾಗದೆ || ೫ ||

ಅಟ್ಟತಾಳ

ಏನೇನರಿಯದ ಪಾಮರ ನಲ್ಪಶಕ್ತಿನಾ ।
ಹೀನ ಮನಸಿನ ದುರ್ವಿಷಯಲಂಪಟ ದುಷ್ಟ ।
ದೀನ ಅನಾಥ ಕೃತಘ್ನರೊಳ್ ಮೊದಲಾಗಿ ।
ಏನು ಮಾಯೊದಿ ನಿನ್ನ ಚಿತ್ತಕ್ಕೆ ಬರುವಿನೊ ।
ನೀ ನೊಲಿದೆನ್ನುದ್ಧರಿಸ ಬೇಕಲ್ಲದೆ ಮಗು ।
ಳಾ ನೊಂದುಪಾಯಗಳನು ಕಾಣೆ ನಿನ್ನಾಣೆ ।
ಶ್ರೀನಾಥ ಗರುಡವಾಹನ ಲಕ್ಷ್ಮೀನಾರಾಯಣ || ೬ ||

ಏಕತಾಳ

ಇನಿತು ವಿವಿಧವಾಗಿ ನಿನ್ನ ಪ್ರಾಪ್ತಿ ।
ಅನುದಿನ ಕೊಟ್ಟು ಪಾವನ ಮಾಡು ನಿನ್ನ ।
ಮನಮುಟ್ಟಿ ಭಜಿಸುವ ಭಾಗ್ಯವ ಬೇಡುವೆ ।
ಕನಸಿನೊಳಾದರು ವಿಷಯಗಳಚಿಂತನೆ ।
ಯ ನೀಯದಲೆ ಸಲಹೊ ಗರುಡ ವಾ ।
ಹನ ಲಕ್ಷ್ಮೀನಾರಾಯಣಸ್ವಾಮಿ ಸರ್ವದ [ ೭ ||

ಜತೆ

ಗರುಡವಾಹನ ಲಕ್ಷ್ಮೀನಾರಾಯಣಸ್ವಾಮಿ ।
ಶರಣ ದೊಡಿಯನೆಂದು ನಂಬಿದೆ ರಕ್ಷಿಸೋ || ೮ ||

# ಸಿರಿಕೃಷ್ಣವಿಠ್ಠಲ

## ಸುಳಾದಿ ೧೩

ರಾಗ ವರಾಳಿ ಧ್ರುವತಾಳ

ನಾರಿ ಎಂಬುವಳು ಪುಣ್ಯಮಾರಿ ಕೇಳಿರಯ್ಯ ।
ನಾರಿಯು ಚಿತ್ರದ ಬೊಂಬಿಯನ್ನೋ ।
ವಾರೆನೋಟದಲೊಮ್ಮೆ ನೋಡಲು ಪುಣ್ಯಾಪ ।
ಹಾರವಾಗುವದು ತತ್‌ಕ್ಷಣದಲ್ಲೀ ।
ಸಾರೆ ಎಲ್ಲಿ ನಿಂದು ಭಾರೆ ಭಾರಿಗೆ ನೋಡೆ ।
ಧೀರರು ಕೆಡುವದಾಶ್ಚರ್ಯ ವೇನೋ ।
ಮಾರನಂಬಿಗೆ ಗುರಿಮಾಡದಲಿರುವಳೆ ।
ನೂರು ವರುಷ ಉಪವಾಸ ಬಿದ್ದವರ ।
ನೂರೊಂದು ಕುಲಕುಂಭಿ ಪಾಕಕ್ಕಿಡದೆ ಬಿಡಳು।
ನಾರಿ ಎಂಬುವಳು ಪುರುಷವೈರಿಕೇಳು ।
ವಾರಿಜಾಕ್ಷ ಸಿರಿಕೃಷ್ಣ ವಿಠ್ಠಲನ್ನ ।
ಸಾರುವರೆಲ್ಲರು ನಾರಿ ಹಂಬಲವ ಬಿಡಿರೋ ॥ ೧ ॥

ಮಟ್ಟತಾಳ

ನಾರಿಗೆ ಮನಸೋತು ರಾವಣ ಏನಾದ ।
ನಾರಿಗೆ ಮನಸೋತ ಸುಯೋಧನನ ನೋಡು ।
ನಾರಿಯಿಂದೆ ಮಡಿದಾ ಕೀಚಕ ಕೇಳಯ್ಯಾ ।
ನಾರಿಯಿಂದೆ ಕೆಟ್ಟಾ ವಾಲಿಯು ಕೇಳಯ್ಯಾ ।
ನಾರಿಯಿಂದೆ ನಹುಷ ಪದದಿಂದ ಚ್ಯುತನಾದ ।
ನಾರಿಯಿಂದೆ ಇಂದ್ರ ದೇಹ ಛಿದ್ರನಾದ ।
ನಾರಿಯಿಂದೆ ಚಂದ್ರ ಕಳೆಗುಂದಿದನಯ್ಯಾ ।
ಮಾರ ಜನಕ ನಮ್ಮ ಸಿರಿಕೃಷ್ಣ ವಿಠ್ಠಲ ।
ನಾರಿಯ ಸೃಜಿಸಿ ಪತಿತರಸದಬಡಿವಾ ॥ ೨ ॥

ತ್ರಿವಿಡಿತಾಳ

ನಾರಿ ಎಂಬ ದಂಡು ಪುರುಷ ಪುರಕೆ ಮುತ್ತೀ ।

ಚೋರೀ ಮಾಡವೆ ಬಿಡದು ಜಾಗ್ರರಾಗೀ ।
ನಾರಿಯು ಭುಜವೆರಡು ಹುಯಿಲುಕಾಳೀ ಕೇಳಿ ।
ನಾರಿಯರ ನೋಟ ಪುರುಷರ ಎದಿಗಂಬೂ ।
ನಾರಿಯು ಸ್ತನ ನೋಡಿ ಪುರುಷನು ವಶನಾಗಿ ।
ನಾರೀ ಅಪ್ಪಣೆಯೊಳು ವರ್ತಿಸುವಾ ।
ನಾರೀ ಕಂಡು ಗೆದ್ದು ದೂರ ಓಡಿಸಿದರೆ ।
ಧಾರುಣಿಯೊಳಗವನೆ ಧನ್ಯ ಪುರುಷ ।
ವೈರಾಗ್ಯ ನಿಧಿಗಳು ನಾರಿಗೆ ಮನಸೋತ ।
ಮಾರುತಿ ಕೇಳಿ ನಿಃಸಂಗರಾಗೀ ।
ನೀರದಾಂಗ ಸಿರಿ ಕೃಷ್ಣ ವಿಠ್ಠಲನಾಣೆ ।
ನಾರಿಯ ರೂಪ ನೆನೆಸಲಾಗದೊ ಮನವೆ ॥ ೩ ॥

ಅಟ್ಟತಾಳ

ಅರವತ್ತು ಸಾವಿರ ವರುಷ ಉಕ್ಕಿನ ಪುಡಿ ಆ ।
ಹರ ವಾಗಿದ್ದಂಥ ವಿಶ್ವಾಮಿತ್ರ ।
ವರ ಕನ್ನಿಕೆಯ ನೋಡಿ ಶ್ವಾನನಾದನು ಮಿಕ್ಕ ।
ನರರ ಪಾಡೇನು ಈ ಧರೆಯೊಳಗೇ ।
ಕರಗದೇ ನವನೀತ ಅಗ್ನಿ ಸಂಬಂಧದಿ ।
ಮರದು ಪೋಗದೆ ನಿನ್ನ ಜ್ಞಾನಭಕ್ತಿ ।
ಪರಮ ವೈರಾಗ್ಯ ನಾರಿಯ ಕಂಡು ನಿಲ್ಲದು ।
ಹರಿದಾಸನಾಗದವ ನಾರೀದಾಸ ।
ಕರುಣಾಸಾಗರ ಸಿರಿ ಕೃಷ್ಣ ವಿಠ್ಠಲನ್ನ ।
ಚರಣವೇ ಗತಿ ಎನ್ನುಪರನಾರಿಯರಬಿಡೋ ॥ ೪ ॥

ಆದಿತಾಳ

ಹೆಂಗಳೇರ ಸಂಗಮಾನ ಭಂಗನಿಶ್ಚಯ ಕೇಳಿರಿ ।
ಹೆಂಗಳೇರ ಸಂಗಜ್ಞಾನ ಭಂಗನಿಶ್ಚಯ ಕೇಳಿರಿ ।
ಹೆಂಗಳೇರ ಸಂಗ ಸುಖ ಭಂಗ ನಿಶ್ಚಯ ಕೇಳಿರಿ ।
ಹೆಂಗಳೇರ ಸಂಗದಿಂದ ರಂಗದೂರಾಗುವ ।

ಮಂಗಳಾಂಗ ಸಿರಿಕೃಷ್ಣ ವಿಠ್ಠಲನು ।
ಸಂಗದೊಲಿಯಬೇಕಾದರೆ ಹೆಂಗಳೇರ ಸಂಗಬಿಡಿರೋ ॥ ೫ ॥

ಜತೆ

ಮುನಿಗಳು ಕೆಡುವರು ಹೆಂಗಳೇರ (ಳಿಯರ) ಸಂಗದಿಂದ ।
ಅನಿಮಿಷರೊಡೆಯ ಶ್ರೀ ಕೃಷ್ಣವಿಠ್ಠಲ ಒಲಿವಾ ॥ ೬ ॥

# ಕೃಷ್ಣ ವಿಠ್ಠಲ

## ಸುಳಾದಿ ೧೪

ರಾಗ ಧ್ರುವತಾಳ

ನೀ ನೊಲಿಯದಿರಲು ವಸುಧಿಯೊಳಿನ್ನ ।
ಕಾವಜನರಾವರೊ ಶ್ರೀನಿವಾಸ ।
ನೀ ನೊಲಿಯದಿರಲು ಭಕ್ತಿಯಿಂದ ಭವಾಬ್ಧಿ ।
ನೋವಿಲ್ಲದಲೆ ದಾಟುವೇನೈಯಾ ।
ಈವರೆ ಗೆದ್ದರು ನೀ ನೊಲಿವ ಯೋಗವನೆಂದು ಕಾಣೆನೊ ।
ಮಾವನ ವೈರಿ ವೇಣು ಶ್ರೀ ಗೋಪಾಲಕೃಷ್ಣ ವಿಠಲ ಇಷ್ಟಾ ।
ದೇವ ಎನ್ನ ಮನದಿಂದ ಅಗಲದಿರೊ ॥ ೧ ॥

ಮಟ್ಟತಾಳ

ಜಗದೊಳಗೆ ಇಳಿಗರ ಮಗ ನೊಮ್ಮಗನಿರಲು ।
ಬಗೆ ಬಗೆ ವಿದ್ಯೆಗಳ ಪೇಳಿ ಅವರನ್ನು ।
ಸುಗುಣ ರಾಯರಗಳು ಮಾಡರೆನೋಡಾ ।
ಜಗದೊಡಿಯ ಕೃಷ್ಣ ವಿಠ್ಠಲ ನಿನ್ನವರೆ ।
ಮಗೆಂದು ತಿಳಿದೆನ್ನ ಪ್ರಗುಣನ ಮಾಡೊ ॥ ೨ ॥

ತ್ರಿವಿಡಿ ತಾಳ

ಅಂದಜಮಿಳ ಕಂದ ನಾರಗನೆಂದು ।
ಒಂದು ಬಾರಿ ಅಂದನೆಂದು ಬಂದು ಭಕ್ತನ ಕಾ ।
ದಂದು ಪತಿತಪಾವನನೆಂದು ಬಿರಿದು ನೀ ತಂದಿಯಂತೆ !

ಇಂದು ಸಲಹೊ ಎನ್ನ ಪೊರೆಯದಿರ್ದಡೆ ಪಾಪ ಎನ್ನ ಆತನ
ರೆನ್ನ ನೋಡಾ ।
ತಂದೆ ಶ್ರೀಕೃಷ್ಣ ವಿಠ್ಠಲ ಬಿರಿದುದು ಬೇಕಾದಡೆ ।
ಮಂದನ್ನ ಸಲಹಯ್ಯಾ ಮಮತೆಯಿಂದ ॥ ೩ ॥

ಆಟತಾಳ (ಅಟ್ಟ)

ದ್ರೌಪತಿ ದುಃಶಾಸನ್ನ ಪತಿಗಾರದೆ ।
ಶ್ರೀಪತಿ ಸಲಹೆಂದು ಮೊರೆ ಇಡಲು ।
ಆ ಪಾಂಚಾಲಯು ಮೊರೆ ಕೇಳಿದಂತೆ ಎನ್ನ ।
ಪಾಪಿ (ಯ) ಮೊರೆ ಕೇಳೋ ಗೋಪಾಲಕೃಷ್ಣ ವಿಠ್ಠಲ ॥ ೪ ॥

ಆದಿತಾಳ

ನಿನ್ನನ್ನೇ ನೆನಿಸಲು ಎನ್ನ ಪಾಪಂಗಳ ।
ಇನ್ನು ಪುಣ್ಯಾಳೋ ಚನ್ನಿಗನೆ ಸನ್ನಷ್ಟನ ನೆಂ ।
ದನವರತ ಬಲು ಬನ್ನ ಬಡುವೆ ಕೇಳೆನ್ನ ಮಾತಾ ।
ಧನ್ಯನ ಮಾಡಲು ನಿನ್ನ ಕೀರುತಿ ಬಲು ।
ಉನ್ನತವಾಹದು ಘನ್ನದಯ್ಯಾ ।
ಮನ್ಮಥ ಮನ್ಮಥ ನಿನ್ನ ಮೂರುತಿ ಬೊ ।
ಮನ್ನ ತೋರಿ ಭವವನ್ನು ಕಳೀ ।
ಚನ್ನ ಕೃಷ್ಣ ವಿಠ್ಠಲ ಎನ್ನ ಪೊರೆಯದಿರೆ ।
ನಿನ್ನವರಾಣೆ ಅನ್ಯಸಾಧನ ಕಾಣೊ ॥ ೫ ॥

ಜತೆ

ಎಂದಿಗಾದರೂ ನಿನ್ನ ಸಂದರುಶನವಿತ್ತು ।
ಮಂದನ ಸಲಹೊ ಮುಕುಂದ ಕೃಷ್ಣವಿಠ್ಠಲ ॥ ೬ ॥

**॥ ಶ್ರೀ ಗುರು ಮಧ್ವೇಶ ಕೃಷ್ಣಾರ್ಪಣಮಸ್ತು ॥**

ಇನ್ನು (೧೫) ಆದ್ಯರ ಸುಳಾದಿ ಮುಂದೆ ಕೊಡುವೆವು.

# ಶ್ರೀ ಮಧ್ವಾಚಾರ್ಯರು ಒಂಭತ್ತು ಜನಕ್ಕೆ

ಯತ್ಯಾಶ್ರಮಕೊಟ್ಟು (೯) ಮೂರ್ತಿಗಳನ್ನು ಕೊಟ್ಟರೆಂಬುದಕ್ಕೆ ಅಪರೋಕ್ಷ ಜ್ಞಾನಿಗಳಾದ

## ಶ್ರೀ ಪ್ರಾಣೇಶ ವಿಠಲ ವಿರಚಿತ ಪದ ೨೨೩

(೧೫೦ ವರ್ಷ ಹಿಂದೆ ಸ್ವಂತ ಬರೆದುದು.)

ಪದ ರಾಗ– ಕಾಂಬೋದಿ ಝಂಪಿ ತಾಳ

ಸುಖತೀರ್ಥರೆದುವರನ ಸ್ಥಾಪಿಸ್ಯೊಂಭತ್ತೆತಿಗಳನು ಮಾಡಿ ಅವರವರಿಗೆ ।
ಅಕಳಂಕ ನಾಮಗಳ ಮೂರ್ತಿಗಳಕೊಟ್ಟ ವಿವರವ ಬಣ್ಣಿಸುವೆ ಸುಜನರು ಕೇಳಿ ॥ ಪಲ್ಲ ॥

ಶ್ರೀ ಪದ್ಮನಾಭ ಹೃಷಿಕೇಶ ನರಹರಿ ಯತಿ ಉಪೇಂದ್ರ ತೀರ್ಥ ।
ಪಾಪಘ್ನ ವಾಮನ ಮುನಿಪ ವಿಷ್ಣುಯತಿ ರಾಮತೀರ್ಥಧೋಕ್ಷಜ ತೀರ್ಥರೂ ॥
ಈ ಪೆಸರಿಲೊಂಭತ್ತು ಮಂದಿ ರಘುಪತಿ ಕಾಳೀಮಥನ ವಿಠ್ಠಲೆರಡೆರಡು ।
ಭೂಪತಿ ನರಸಿಂಹ ವಿಠ್ಠಲ ಹೀಗೆ ಒಂಭತ್ತು ಮೂರ್ತಿಗಳನು ಕೊಟ್ಟು ॥ ೧ ॥
ಪದುಮನಾಭರಿಗೆ ರಾಮನ ಕೊಟ್ಟು ಸಕಲ ದೇಶವನಾಳಿ ಧನತಾ ಎನುತಲೀ॥
ಅದರ ತರುವಾಯ ಹೃಷಿಕೇಶ ತೀರ್ಥರಿಗೊಂದು ರಾಮಮೂರ್ತಿಯ ಕೊಟ್ಟು ।
ಬುಧಜನಾರ್ಚಿತ ನೃಸಿಂಹಾರ್ಯರಿಗೆ ಕಾಳಿಯ ಮರ್ದನನಾದ ಶ್ರೀ ಕೃಷ್ಣ ಮೂರ್ತಿ। ಹೃದಯ ನಿರ್ಮಲ ಜನಾರ್ದನತೀರ್ಥರಿಗೆ ಕಾಳೀ ಮಥನ ಶ್ರೀ ಕೃಷ್ಣ ಮೂರ್ತಿ ಕೊಟ್ಟು॥೨॥ ಯತಿವರಉಪೇಂದ್ರರಾಯರಿಗೆ ವಿಠ್ಠಲನ ವಾಮನ ತೀರ್ಥರಿಗೆ ವಿಠ್ಠಲನಾ । ನತಸುರದ್ರುಮ ವಿಷ್ಣುತೀರ್ಥರಿಗೆ ವರಹ ಶ್ರೀರಾಮತೀರ್ಥರಿಗೆ ನೃಸಿಂಹ ॥ ಅತಿ ಸುಗುಣಧೋಕ್ಷಜ ತೀರ್ಥರಿಗೆ ವಿಠ್ಠಲನಿಂತು ವೊಂಭತ್ತು ಮೂರ್ತಿಗಳ ಕೊಟ್ಟು । ಕ್ಷಿತಿಯೊಳಗೆ ರೌಪ್ಯಪೀಠ ಪುರಸ್ಥ ಪ್ರಾಣೇಶ ವಿಠ್ಠಲನ ನರ್ಚನೆಗಿಟ್ಟರು ಕೇಳಿ ॥ ೩ ॥

---

ಈ ಪರೋಕ್ಷಜ್ಞಾನಿಗಳ ಪದಕ್ಕೆ ಮೂಲಾಧಾರವಾದ ಶ್ರೀ ಹೃಷಿಕೇಶ ತೀರ್ಥರ ಪದ್ಧತಿ– ಶ್ಲೋಕ ೧೫-೧೬-೧೭-೧೮

ಚನ್ನಾಗಿ ನೋಡಿರಿ. ಇನ್ನೂ ಸಾಕಷ್ಟು ಜ್ಞಾನಿಗಳ ಪದವಿವೆ.

# ಪದ್ಯ ವಿಭಾಗ ೧

## ಆದ್ಯರ ಸುಳಾದಿಗಳು

### ವೈಕುಂಠ ವೆಂಕಟೇಶ

**ಸುಳಾದಿ ೧೫**

ರಾಗ ಧನಾಶ್ರಿ ಧ್ರುವತಾಳ

ಸುರನದಿಯು ಪಡೆದ ಚರಣಾಂಬುರುಹ ಪದ ।
ದಾನವರೇನು ಬಲ್ಲರಾ ಎರಡು ಪದದ ।
ಬಿರುದಿನ ಖಡ್ಡೆಯುವ ವಿರೂಪಿನ ಪೆಂಡೆಯುದ ಚಲುವ ।
ಸುರಚರ ಮಕ್ಕದಳೀವ ಭವಪರಿಭವಿತ ಉರುಗಳ ।
ಪೀತಾಂಬರದಿಂದೆಸೆವ ಉರುನಿತಂಬಿಗಳ ।
ಶಿರಿಯು ಪಿರೂರದ ಹಾರ ತ್ರಿಸರದಿಂದೊಪ್ಪುವ ಕಂಧರದ ।
ಸರಸಿಜ ನಯನಂಗಳು ದಿನಕರ ಕಿರಣವು ಸುಳಿವ ।
ಮಕುಟವನಿಂದಿರಿಸಿನ್ನಾ ಕರುಣಾಕರ ವೈಕುಂಠ ।
ವೆಂಕಟಗಿರಿ ರಮಣ ಸುರನದಿಯು ॥ ೧ ॥

**ಮಟ್ಟತಾಳ**

ನಿನ್ನ ನಾಮಧಾರಿಯಾಗಿ ನಿನ್ನ ಚಿನ್ಹವನ್ನು ಧರಿಸಿ ।
ನಿನ್ನ ಹೊನ್ನ ಹರಿವಾಣದ ಪ್ರಸಾದವನುಂಡು ದಾಸನಾದೆನಾ ।
ಇನ್ನುದಾಸೀನ ಮಾಡಸಲ್ಲ ರಾಘವ ವೈಕುಂಠ ವೆಂಕಟೇಶ ॥ ೨ ॥

**ರೂಪಕತಾಳ**

ನಿನ್ನ ಬೆಳ್ಳುಡಿ ಬಾಯಿದಂಬಲದ ಕಾಳಾಂಚಿ ಎನ್ನದು ಎನ್ನದು ।
ನಿನ್ನಶಿರಮುಡಿಗೆ ಮುಡಿಸಿದ ಘನ್ನಚಂಪಕ ಜಾಜಿಕುಸುಮಪ್ರಸಾದವು ।
ಎನ್ನದು ಎನ್ನದು ಘನ್ನ ವೈಕುಂಠ ಗಿರಿರಮಣಾ ॥ ೩ ॥

**ಅಟ್ಟತಾಳ**

ಪೊಡೆಯ ನೀ ನಡಿ ಇಡೆ ಹೊನ್ನ ಹಾವಿಗೆಯು ।
ತಂದಿಡುವ ಸೇವೆ ಎನ್ನದು ಎನ್ನದು ।

ಪೊಡೆಯ ನೀನಡೆ ನಡೆ ಪಾದಪರಾಕು ಸ್ವಾಮಿಜಯಯೆಂದು ।
ಘಡಿಸುವ ಊಳಿಗ ಮುನ್ನವೆ ಎನ್ನದು ಎನ್ನದು ।
ಪೊಡೆಯ ಬಿಡೆನು ವೈಕುಂಠ ವೆಂಕಟಾಚಲ ಪೊಡೆಯ ದೇವೇಶ ॥
ಮೆಲ್ಲಡಿ ದಾವರೆ ಮೆಟ್ಟಿ ನಡೆ ಎನ್ನದು ಎನ್ನದು ॥ ೪ ॥

ಏಕತಾಳ

ಮನಕೆ ನಿನ್ನಯ ನೆನೆವುದೆ ಜೀವ ।
ತನುವಿಗೆ ನಿನ್ನಡಿಗೆರಗಿ ಪುಳಕಿತವ ಸಂದಿಸುವದೆ ಜೀವನ ।
ಇನಿತು ಭುವನದಲ್ಲಿ ಧನ್ಯವ ನಾನರಿಯೆನು ।
ವೈಕುಂಠ ವೆಂಕಟಗಿರಿ ರಮಣ ।
ಮನಕೆ ನಿನ್ನಯ ನೆನೆವುದೇ ಜೀವನಾ ॥ ೫ ॥

ಜತೆ

ಕರುಣಿಸಯ್ಯಾ ಎನಗಿನಿತನೆ ಕರುಣಾಕರ ವೈಕುಂಠ ವೆಂಕಟೇಶ ನಿನ್ನ
ಚರಣದ ಸೇವೆಯನ್ನು ಕರುಣಿಸಯ್ಯಾ ಎನಗಿನಿತನೆ ॥ ೬ ॥

# ವೈಕುಂಠ ವಿಠ್ಠಲ

## ಸುಳಾದಿ ೧೬

ರಾಗ ಧ್ರುವತಾಳ

ಎಲ್ಲಿಹ ಮಧುರಾಪುರ ಇನ್ನೆಲ್ಲಿಹ ಕಂಸಾಸುರನೆ ।
ಎಲ್ಲಿಂದ ಬಂದುದೆ ಬಿಲ್ಲುಹಬ್ಬ ತಾನು ।
ಎಲ್ಲಿಹ ನಕ್ರೂರ ನಿವತಾನಲ್ಲಿಂದ ಬಂದನೆ ।
ಎಲ್ಲಿ ನಮ್ಮ ಗೋವಿಂದನೊಡಗೊಂಡುನೊಯ್ದನೆ ।
ಎಲ್ಲಿಯ ಮನೆ ನಮಗಿನ್ನೆಲ್ಲಿಯ ಮನೆ ವಾರುತ ।
ಎಲ್ಲಿ ನಮ್ಮ ವೈಕುಂಠ ವಿಠ್ಠಲ ।
ಎಲ್ಲಿಗ್ಹೋದಡಲ್ಲಿಗೆ ಹೋಹನಡೆ ಕೆಳದಿ ॥ ೧ ॥

ಮಟ್ಟತಾಳ

ಈತಗೆಲ್ಲಿ ದೊರಕಿತೆ । ಮಾತಿನ ಅಕ್ರೂರತನ ನೋಡೆ ಕೆಳದಿ ।
ಭೂತಳಕ್ಕೆ ಪೆಸರಾದ ಕ್ರೂರಗೆ। ಮಾತಿನ ಕ್ರೂರತನನೋಡೆ ಕೆಳದಿ
ಯಾತಕೆ ವೈಕುಂಠ ವಿಠ್ಠಲನಗಲಿಸುವಗೆ ।
ಮಾತಿನ ಕ್ರೂರತನ ನೋಡೆ ಕೆಳದಿ ॥ ೨ ॥

ರೂಪಕತಾಳ

ಬಿಲ್ಲು ಹಬ್ಬ ಮಧುರಾಪುರ ।
ದಲ್ಲಿ ನಿನಗೆ ಕೃಷ್ಣಯ್ಯಾ ನಿನ್ನ ।
ಬಿಲ್ಲು ಹಬ್ಬ ಸ್ಮರಗೆಮ್ಮನೊಪ್ಪಿಸಿತು ನಿನ್ನ ।
ಬಿಲ್ಲು ವಲ್ಲಭ ವೈಕುಂಠ ವಿಠ್ಠಲ ನಿನ್ನ ಬಿಲ್ಲು ಹಬ್ಬ ॥ ३ ॥

ಝಂಪೆತಾಳ

ಚರಣ ಸರಸಿಜವು ನಮ್ಮ । ಶಿರದ ಮೇಲಿಡ ಕೃಷ್ಣ ।
ಮರಳಿ ನಮ್ಮ ಗೋಕುಲಕ್ಕೆ ಬಾಹವೆಂತ ।
ಪರಮ ಪುರುಷ ಪುರುಷೋತ್ತಮ ।
ಮರಳಿ ನಮ್ಮ ಗೋಕುಲಕೆ ಬಾಹದೆಂತು ।
ಸಿರಿ ರಮಣ ವೈಕುಂಠ ವಿಠ್ಠಲ ಮರಳಿ ॥ ೪ ॥

ತ್ರಿವಿಡಿತಾಳ

ಮೂರುತಿ ಮನದಲ್ಲಿ । ಕೀರುತಿ ಕಿವಿಯಲ್ಲಿ ।
ಇರಿಸು ರಮಾ ರಮಣನೆ ಅನ್ಯ ವಿ ।
ಚಾರ ನಮಗ್ಯಾತಕಯ್ಯಾ ಮಾರವಣನೆ ।
ವಾರಿಜಾಕ್ಷ ವೈಕುಂಠ ವಿಠ್ಠಲ ।
ಕರುಣಾಕರೆನ್ನ ಮಾರಮಣನೆ ॥ ೫ ॥

ಅಟ್ಟತಾಳ

ಹರಿ ಕರುಣಾಮೃತಂಬುಧಿಯು ಲೋಲ್ಯಾಡಿ ।
ಮರಳಿ ವಿಯೋಗ ದುಃಖದಿ ಮುಳುಗಾಡಿ ।
ಹರಿ ವಿರಹದಿ ಕಳ್ವರಾಗಿ ತಿರುಗಿ ।
ಮರಳಿ ವಿಯೋಗ ಸಿರಿರಮಣ ವೈಕುಂಠ ವಿಠ್ಠಲರೇಯಾ ।
ಪೊರೆಯ ಬೇಕು ನಿನ್ನ ನೆರೆನಂಬಿದವರ ಮರಳಿ ॥ ೬ ॥

ಆದಿತಾಳ

ಹರಿ ವಿರಹದಿ ಬೆಚ್ಚೆಂತ ರಂಗದಿ ।
ಸ್ಮರ ನರಳಂಬಿಗೊಡ್ಡಿದ ಬಹಿರಂಗದಿ ।
ತರುಣಿಯು ಜನರನ್ನ ಹರಿ ವಿರಹದಿ ಕಳ್ವರಾಗಿ ।

ತಿರುಗುವ ತರುಣಿಯು ಜನರನ್ನ ।
ಸಿರಿ ರಮಣ ವೈಕುಂಠ ವಿಠಲರೇಯಾ ।
ಪೊರೆಯ ಬೇಕು ನಿನ್ನ ನೆರೆನಂಬಿದವರನ್ನ ।
ತರುಣಿಯು ಜನರನ್ನ ॥ ೭ ॥

**ಜತೆ**

ಗೋಕುಲದ ಗೋಪಾಂಗನೆಯರುಗಳು ।
ಲೋಕೇಶ ವೈಕುಂಠ ವಿಠ್ಠಲನ್ನ ನೆನೆದರು ಗೋಕುಲದಿ ॥ ೮ ॥

# ವೈಕುಂಠ ವಿಠ್ಠಲ (೨)

## ಸುಳಾದಿ ೧೭

ರಾಗ ಸಾವೇರಿ ಧ್ರುವತಾಳ

ಲಕ್ಷುಮೀಯ ಮಸ್ತಕಕ್ಕೆ ಮಣಿ ಮೌಳಿಯಾದಾ ।
ಲಕ್ಷುಮೀಯ ಅಕ್ಷಿ ಮಧುಪ ಕರುಣಾಬ್ಜವಾದಾ ।
ಲಕ್ಷುಮೀಯ ಭುಜಗಳಿಗೆ ಭುಜ ಕೀರ್ತಿಯಾದಾ ।
ಲಕ್ಷುಮೀಯ ಕರಾಬ್ಜಕ್ಕೆ ರಾಜಹಂಸನಾದಾ ।
ಲಕ್ಷುಮೀಯ ಲಕ್ಷುಮೀಯ ಪೂಮಾಣಿಕ್ಯಪದಕವಾದಾ ।
ಲಕ್ಷುಮೀಯ ಲಕ್ಷುಮೀಯ ಮಹಾ ಹಾರ ಕೇಯೂರವಾದಾ ।
ಲಕ್ಷುಮೀಯು ಲಕ್ಷುಮೀಯಾನಂದಾಬ್ಧಿಗೆ ಪೂರ್ಣಚಂದ್ರನಾದಾ ।
ಲಕ್ಷುಮೀಯ ನಿನ್ನ ಪಾದ ಸರಸಿಜ ಎನ್ನ ।
ಮಸ್ತಕದಲೊಮ್ಮೆ ಅಲಂಕರಿಸು ।
ವೈಕುಂಠ ವಿಠ್ಠಲ ಪಾದಾ ಅನಂತ ಮಹಿಮಾ ॥ ೧ ॥

**ಮಟ್ಟತಾಳ**

ಅಜನಿಗೊಲಿದು ದೇ–ಹಾರವಾದಾ ।
ಭವನಿಗೊಲಿದು ಸಾಲಿಗ್ರಾಮ ದೇವರಾದಾ ।
ಯಜು ಸಾಮ ಮುಖ್ಯನಿಗಮ ಮೌಳಿಮಣಿಯಾದಾ ।
ಭಜಕ ದಿವಿಜ ನಿಕರಾಪಾರ ಬ್ರಹ್ಮವಾದಾ ।
ತ್ರಿಜಗ ವಂದಿತ ಪದ ವೈಕುಂಠ ವಿಠ್ಠಲ ।
ನಿಜ ಕರುಣದಿಂದೆನ್ನ ಮಸ್ತಕದಮೇಲೊಮ್ಮೆ ದಯಮಾಡೊ॥೨॥

**ರೂಪಕತಾಳ**

ಮುನಿ ಹೃದಯ ನಿಕೇತನ ಜ್ಯೋತಿಯ ।
ತನು ಸೊಬಗಿನ ಪುಂಜವ ನನುದಿನ ।
ಸನಕಾದಿಗಳಾಡುತ್ತ ಪಾಡುತ್ತ ।
ನೆನೆವ ಪರಮ ಕರುಣ ಮೂರ್ತಿಯ ।
ಘನ ಪಾದ ವೈಕುಂಠ ವಿಠ್ಠಲ ।
ತಾನು ಸರಸಿಗೆ ಸರಸಿಜವಾಗಿಡೊ ॥ ೩ ॥

**ಝಂಪೆತಾಳ**

ದುರಿತ ತಿಮಿರ ವಡಗದು ಮನ ।
ಸರಸಿಜ ವರಳ ದೂ ।
ಹರಿ ನಿನ್ನ ಅರುಣ ಕಿರುಣ ಭರಿತ ಚರಣ ।
ಸರಸಿಜ ಸಖನುದಯಿಸದಿರೇ ।
ಪರಮ ದಯಾನಿಧೆ ।
ಸಿರಿವೈಕುಂಠ ವಿಠ್ಠಲರೇಯ ಎನ್ನ ಬಿನ್ನಪವಿದು ॥ ೪ ॥

**ತ್ರಿವಿಡಿ ತಾಳ**

ಪಾದಾಂಬುಜ ಮಧುಕರ ।
ಪಾದಾಂಬುಜ ಭೂಮಿಯಂತೆ ಬಿಂದುವಂತೆ-ವಾಮಾ ।
ಪಾದ ಕರ್ನಿಕೆ ಯಾಕಾಶದಂತೆ ।
ಶಿವ ನಾದರದಿ ಧರಿಸಿದ ಗಂಗೆಯಂತೆ ।
ಆದಿ ದೇವ ಶ್ರೀ ವೈಕುಂಠ ವಿಠಲದಯಾನಿಧೆ ॥ ೫ ॥

**ಅಟ್ಟತಾಳ**

ಕಡಹದ ಮರನ ನಡರಿ ಕಾಳಿಂಗನ ।
ಮಡುವ ಧುಮುಕಿ ಕಾಳಿಂಗನ ಶಿರದಲ್ಲಿ ।
ಧಡುಮೆನೆ ವಿಷಜಾಲ ಧಡಿಗಳ ।
ವೊಡಿಗೆ ಸಪ್ಪುಳಿಗೆ ಕುಣಿದಾಡಿದೆ ಗಡಾ ।
ಕಡುಮೃದು ಪಾದ ವೈಕುಂಠ ವಿಠ್ಠಲಾ ।
ಇಡು ಎನ್ನ ಕ್ರೋಧಾಹಿಮದವಳಿಯಲಿ ॥ ೬ ॥

ಆದಿತಾಳ

ಕಂಬುಕೊಳಲು ತುತ್ತೂರಿ ಮುವುರಿಗಳು ।
ಸಂಭ್ರಮದಲಿ ಗೋಪಾಲರು ನೆರೆದು ।
ಭೊಂ ಭೊಂ ಭೊ ತುತ್ತುರುತ್ತುರೆನೆ ।
ಸುರ ರಂಬರದಲಿ ಪೂಮಳೆಗರಿಯೇ ।
ಕಂಬುಕಂಠ ವೈಕುಂಠ ವಿಠ್ಠಲ ಪಾದಾ ।
ಇಂಬಾಗಿ ಎನ್ನ ಹೃದಯ ಮಧ್ಯದಲಿಡು ॥ ೭ ॥

ಜತೆ

ದೇವ ದೇವ ಜಗಂಗಳ ಪೊರೆವಾ ।
ಶ್ರೀ ವೈಕುಂಠ ವಿಠ್ಠಲ ಸಲಿಸೋ ಬಿನ್ನಪವಾ ॥ ೮ ॥

# ಅಚ್ಯುತ ವಿಠ್ಠಲ (೧)

## ಸುಳಾದಿ ೧೮

ರಾಗ ಧ್ರುವತಾಳ

ಹೊನ್ನು ಹಣ ಹಾಗು ವೀಸಯೇನು ಇಲ್ಲದ ।
ಚಿನಿವಾರನ ಕೈಯ ಚೀಲದಂತೆ ।
ಗುಲುಗುಂಜಿ ಕವಡೆ ಕಟ್ಟಳೆ ಕಾಳು ಮಾತಿನ।
ಚಿನಿವಾರನ ಕೈಯ ಕಪಟದಂತೆ ।
ಎನ್ನ ತನು ಮನ ಅಚ್ಚ ಕಳಂಕವಯ್ಯಾ ।
ಎನ್ನ ತನು ಮನ ಬಚ್ಚೆ ಬರಿದೆಯಯ್ಯಾ ।
ಬಚ್ಚ ಬರಿಯದೆ ಭಕುತ ನಾನಯ್ಯ
ಅಚ್ಯುತ ವಿಠ್ಠಲನ ಭಕುತಿಯೊಳಿಪ್ಪುದಿಲ್ಲಾ ।
ಅಚ್ಯುತ ವಿಠ್ಠಲನ ವ್ಯವಹಾರಿ ನಾನಯ್ಯಾ ।
ಹೊನ್ನು ಹಣ ಹಾಗು ವೀಸಾ ॥ ೧ ॥

ಮಟ್ಟತಾಳ

ಮಡಕೆಯ ಕಂಠಕ್ಕೆ ಮಣಿಯಿಕ್ಕಿದಂತೆ ।
ಅಡಕವೆನ್ನ ಕೊರಳಾ ತುಲಸಿ ।

ಮಡಕಿಗೆ ಹರಿಯ ಭಕುತಿಯುಂಟೆ ಹೇಳಿರೊ ಮುಕ್ಕು ।
ಮಡಕಿಗೆ ಆ ಹರಣತನ ಉಂಟೆ ಹೇಳಿರೊ ।
ಕಾಮ ಕ್ರೋಧವೆಂಬ ಕತ್ತೆಯ ಲದ್ದಿಯಲಿ ಮಾಡಿದ ।
ಮಡಿಕೆಗೆ ಹರಿಯ ಭಕ್ತಿಯುಂಟೇ ಹೇಳಿರೊ ।
ಅಚ್ಯುತ ವಿಠ್ಠಲನಚಕ್ರಮಡಿಕೆಗೆ ಹರಿಯಭಕ್ತಿಯುಂಟೇ ಹೇಳಿರೊ ॥ ೨ ॥

ರೂಪಕತಾಳ

ಸೊಪ್ಪಿನ ತೋಟಕ್ಕೆ ರಕ್ಷೆಯ ಬೋರಡಿಗಾಗಿ ।
ಸುಣ್ಣವ ಬತ್ತಿಸಿ ಎನ್ನಂಗಕ್ಕೆ ಗೋಪಿಚಂದನಗಳು ।
ಊರ್ಧ್ವ ಪುಂಡ್ರಗಳು ದ್ವಾದಶನಾಮವ ಬಾಚಿಸಿಕೊಂಬೆನಯ್ಯಾ।
ಹೊರಗೆ ದಂಡ ಒಳಗೆ ಬಿಟ್ಟ ಬಯಲು ।
ಅಚ್ಯುತ ವಿಠಲ ಭಕ್ತಿ ಎಳ್ಳಷ್ಟುಯಿಲ್ಲ ।
ನಾಚಿಕೆ ಇಲ್ಲದೆ ಬಾಚಿಸಿ ಕೊಂಬೆನಯ್ಯಾ ।
ನಾಚಿಕೆ ಗೊಂಬೆನಯ್ಯಾ ಜನರ ಮೋಹಕ್ಕಾಗಿ ।
ಸೊಪ್ಪಿನ ತೋಟಕ್ಕೆ ರಕ್ಷೆಯಾ ॥ ೩ ॥

ಅಟ್ಟತಾಳ

ಮುದ್ರೆಯೊತ್ತಿದ ಸೂಳೆ ಕಾಮುಕರ ಸುಲಿವಂತೆ ।
ನಿಜಭಕ್ತನಾನೆಂದು ಸುಲಿವೆನು ಧನಿಕರನು ।
ಹರಿಯ ಮುದ್ರಾ ಧಾರಿ ತಾನೆಂದು ನಂಬಿಸಿ ।
ಭೂಚಕ್ರ ಮುದ್ರೆಯೊತ್ತಿ ಸುಲಿವೆನು ಧನಿಕರನು ।
ಹೊರಗೆ ದಂಡ ಮುದ್ರೆ ಒಳಗೆ ಕಳ್ಳಮುದ್ರೆ ಇದ್ದುದ ಕಂಡು ।
ನಗುತಿರ್ದ ಅಚ್ಯುತ ವಿಠ್ಠಲರಾಯಾ ಸುಲಿವೆನು ಧನಿಕರನೂ ॥೪॥

ಏಕತಾಳ

ಓದಲಿಲ್ಲ ಕೇಳಲಿಲ್ಲ ಮಗನ ಹೆಸರು ಉಪಾಧ್ಯನೆಂಬರು ।
ಓದಲಿಲ್ಲ ವೇಷದ ಭಾಗವತ ನೆನೆಸಿಕೊಂಬೆನು ।
ಓದಲಿಲ್ಲ ಕೇಳಲಿಲ್ಲ ಅಚ್ಯುತ ವಿಠ್ಠಲನ ಕಿಂಕರ ।
ನೆನೆಸಿಕೊಂಬೆನೊ ಓದಲಿಲ್ಲ ಕೇಳಲಿಲ್ಲ ॥ ೫ ॥

ಜತೆ

ಡಂಬಕ ತನದಲಿ ಪೊಟ್ಟೆಯ ಪೊರೆವೆ ವಿ ।
ಡಂಬನ ಪಾಲಿಸು ಅಚ್ಯುತ ವಿಠ್ಠಲರಾಯಾ ।
ಡಂಬಕ ತನದಲಿ ಪೊಟ್ಟೆಯ ಪೊರೆವೆ ॥ ೬ ॥

# ಅಚ್ಯುತ ವಿಠ್ಠಲ (೨)

## ಸುಳಾದಿ ೧೯

ರಾಗ ಕೇದಾರ ಗೌಳ ತಾಳ ಧ್ರುವ

ಕಲ್ಪಾಂತ ವಾದಡಂ ಕೇಡಿಲ್ಲ ತಮಗೆಂದು ।
ಕುಪ್ಪೆಯ ಮಾಡಿ ಧನವ ಹೂಳಿ ಬಚ್ಚಿಟ್ಟಡಂ ।
ಮುಪ್ಪಿನ ಕಾಲಕ್ಕೆ ಈ ಧನವೆ ಜೀವನ । ತ ।
ನ್ನ ಪ್ರಾಣ ವಳಿದಂದೀಗೆ ಸ್ತ್ರೀ ಪುತ್ರಾದಿಗಳಿಗೆ ।
ಇಪ್ಪ ಜೀವನವೆಂದು ಧನಕ ಬಂದ ವಿಘ್ನಗಳ ।
ತಪ್ಪೀಸ ತದಗತ ಮಾನಸನಾಗೀ ಕಾ ।
ದಿಪ್ಪನು ಹಗಲು ಇರಳು ಬಿಡದೇ ।
ಸಪ್ಪಡಿ ಅನ್ನವನುಂಬ ಯಾಚಕರಿೀಗೆ ।
ಚಪ್ಪಾಳೆ ನಿಡುವ ಗತಿವಿಲ್ಲವೆಂದೂ ।
ಅರ್ಪಿತ ಅಚ್ಯುತ ವಿಠ್ಠಲಗೆ ತದ್ಭಕ್ತರಿಗೆ ।
ಸಪ್ಪಾನಿತ ಕಾದಿಪ್ಪ ಲೋಭಿಯನುಣಗೊಡದೆ ।
ಅಪ್ಪಳಿಸಿ ಹೆಡೆ ತಲೆ ಮೃತ್ಯು ಎಳದು ವೈವಾಗ ।
ಕಪ್ಪಿ ಎಂದದಿ ಬಾಯ್ಬಿಡುತ ಕಡೆಗೆ ಕೆಡುವಾ ॥ ೧ ॥

ಮಟ್ಟತಾಳ

ಫಣಿಗೆ ಲೋಭಿಗೆ ಭೇದ ವಾವದೊ ಫಣಿ ತಾ ।
ನುಣದೆ ಪರರಿಗೀಯದೆ ಮುಟ್ಟಗೊಡದೆ ಜನರ ।
ಕ್ಷಣ ತೊಲಗದಲೇ ಕಾದಿಪ್ಪ ದಹಿತಾ ।
ಭಣಗು ಲೋಭ ಧನವ ಅಚ್ಯುತ ವಿಠ್ಠಲ ।
ಉಣಲೀಸನು ಆಧಿ ವ್ಯಾಧಿಗಳನು ಕೊಟ್ಟು ।
ದಣಿಸುವ ಪರದಿನಿರ್ಧನಿಕನ ಮಾಡುವನು ॥ ೨ ॥

### ತ್ರಿವಿಡಿತಾಳ

ಜನ್ಮ ಜನ್ಮಾಂತರದಿ ಬೊಮ್ಮ ರಕ್ಕಸನಾಗಿ ।
ಜನ್ಮಾದಿ ಧನ ಲೋಭಿಯಾದಾ ಸಂದೇಹವಿಲ್ಲಾ ।
ಬೊಮ್ಮ ರಕ್ಕಸಗಿವಗೇನು ಭೇದಾ ।
ಬ್ರಾಹ್ಮಣನಂತಿಪ್ಪ ಬೃಹತ್‌ಶರೀರಿಯಾಗಿ ।
ಬೊಮ್ಮ ರಕ್ಕಸಗಿವಗೇನು ಭೇದಾ ।
ಬೊಮ್ಮ ಜನಕ ನಮ್ಮ ಅಚ್ಯುತ ವಿಠ್ಠಲ ।
ಬೊಮ್ಮರಕ್ಕಸ ಯೋನಿಯಲ್ಲಿ ನೂಕುವನಾಗಿ ।
ಬೊಮ್ಮ ರಕ್ಕಸಗಿವಗೇನು ಭೇದಾ ॥ ೩ ॥

### ಅಟ್ಟತಾಳ

ಇದ್ದು ಇಲ್ಲವೆಂದು ಮುದ್ರಿಯನೇ ಮಾಡಿ ।
ಸದ್ಭಾಗಗೊಡದಂತೆ ಹೂಳಿ ಧನವನ್ನು ।
ಇದ್ದಿಲ್ಲ ವೆನ್ನ ಬೇಡಿರಿ ನೀವೆಲ್ಲರೂ ಇದ್ದಿಲ್ಲಾವೆನ್ನಬೇಡಿರಿ ।
ಬುದ್ಧಿವಂತರು ಕೇಳಿ ಲುಬ್ಧತನದಿಂದ ಇದ್ದಿಲ್ಲವೆನಬೇಡಿರಿ ।
ಇದ್ದಿಲ್ಲವೆಂದರೆ ಅಚ್ಯುತ ವಿಠ್ಠಲ ।
ಇದ್ದಲ್ಲಿ ಮಾಡುವ ಶಬ್ದಗೋಚರ ತಾನು ।
ಇದ್ದಿಲ್ಲಾವೆನಬೇಡರಿ ॥ ೪ ॥

### ಆದಿತಾಳ

ಧರ್ಮಾಗ್ನಿ ನೃಪ ತಸ್ಕರರೆಂಬ ನಾಲ್ವರು ।
ನಿಮ್ಮ ಧನಕೆ ದಾಯಾದಿಗಳೆನಿಪರು ।
ಧರ್ಮಗೆ ದಾಯವ ನೀಯದಿದ್ದರೆ ತಮ್ಮ ।
ತಮ್ಮ ಪಾಲೊಡವಿಯ ಕಳವರು ಮೂವರು ।
ದುರ್ಮದರಾಗದೆ ಧರ್ಮನ ಭಜಿಸಲು ।
ನಮ್ಮ ಅಚ್ಯುತ ವಿಠ್ಠಲ ನಿಮ್ಮ ಗೊಲಿದವು ।
ಧರ್ಮ ಭಟರ ಬಾಧೆಗಳು ತಪ್ಪಿಸುವಾ ॥ ೫ ॥

### ಜತೆ

ಇಂತೀಲೋಭಿಯ ಸಂಗಕೊಪ್ಪಿಸಾದೆಂದೆಂದು ।
ಸಂತೈಸಬೇಕೆನ್ನ ಅಚ್ಯುತ ವಿಠ್ಠಲಾ ॥ ೬ ॥

# ವರದ ಕೇಶವ (೧)

## ಸುಳಾದಿ ೨೦

ರಾಗ ತಾಳ ಧ್ರುವ

ತನ್ನ ಶರಣರ ಜರದಡಂ । ಕರುಳವಾಲೆಯ ಕಿತ್ತ ಉರಿಮಾರಿ-
ದೈವವೆಂದರಿಯಿದೆ ।
ತನ್ನ ಶರಣರಾ ಜರದಡಂ । ಚೈದ್ಯಜರದುನುಡಿವ ಸಭೆಯಲ್ಲಿ ಶಿರ-
ವರಿದುದಾ ।
ಉರಿ ಮಾರಿ ದೈವವೆಂದರಿಯರೇ । ತನ್ನ ಶರಣರಾ ಜರದಡಂ ।
ಪಿರಿದು ಲೋಕ ಮಾಸಂಕರುಷಣನಾಗಿ ನುಂಗಲು ।
ಉರಿವ ದೈವವೆಂದರಿಯರೇ । ತನ್ನ ಶರಣರಾಜರದಡಂ ।
ಉರಿ ಮಾರಿ ದೈವದೊಳುರಿ ಮಾರಿಯು ತಾ ।
ಕರುಣಾಳುಗಳೊಳತಿ ಕರುಣಾಳು ।
ಮೊರೆ ಹೊಕ್ಕವರ ಕಾಲಕರ್ಮವ ಗೆಲುವರೇ ।
ವರದ ಕೇಶವನ ಅಂಘ್ರಿಯ ಸಾರಿ ಬದುಕಿರೋ ।
ತನ್ನ ಶರಣರ ಜರದಡಂ ॥ ೧ ॥

ಮಟ್ಟತಾಳ

ಹರಿಶರಣರ ಪೀಡಿಸಿ ಹರಿಮಹಿಮೆಯ ।
ಜರಿದು ನುಡಿವ ಹಿರಣ್ಯಕ ಚೈದ್ಯರುಗಳ ।
ಕರುಳ ಮಾಲೆಯ ಕಿತ್ತನು ಶಿರಿವರದನು ।
ಉರಿ ಮಾರಿ ದೈವವಲ್ಲವೆ ।
ಕೆಣಕಬಹುದೆ ಉರಿ ಮಾರಿ ದೈವವಲ್ಲವೆ ।
ಹರಿಶರಣರ ಕೇಳುಂಬಂ ।
ಪರಗತಿಯ ನ ಂಬೋವರದ ಕೇಶವರಾಯ ।
ಉರಿಮಾರಿ ದೈವವಲ್ಲವೆ ॥ ೨ ॥

ರೂಪಕತಾಳ

ಆವಾದೈವದ ಆ ಶರಣ ಹೊಕ್ಕಡುಂ । ಮೊಣೂದ ಬಲ್ಲಿದನಲ್ಲದಿದ್ದಡುಂ ।
ಕಾವಡೆ ಕೊಲ್ಲುವಡೆ ಸ್ವತಂತ್ರ ಉಂಟೇ । ಕಾವಕೊಲ್ಲುವ ನಮ್ಮ ವರದ-
ಕೇಶವ ರಾಯನಂಘ್ರಿಯ ।

ವೃಥವಿಡಿದು ಬದುಕಲರಿಯರೋ ।
ಕಾವಡೆ ಕೊಲ್ಲುವಡೆ ಸ್ವತಂತ್ರ ಉಂಟೆ || ૩ ||

ಅಟ್ಟತಾಳ

ಮೃತ್ಯುಮಾರಿ ಮಸಣಿಗಳು ಕಾಯ್ದರೆಂದು । ತುತ್ತ ಭಕುತಿ ಇತ್ತ ಕತ್ತೆ-
ಜೀವರು ಕೇಳಿ ಹೆತ್ತೈಯ್ಯಾ ।
ಕೊಲುವರೇ ಮತ್ತಾರು ಕಾವರು । ಪೃಥ್ವಿಸುಂಗಲು ಇಳಿದು ತೆಗೆದರಾರು।
ಹೆತ್ತೈಯ್ಯಾ ಕೊಲುವಡೆ ಮತ್ತಾರು ಕಾವರು । ಒತ್ತೊತ್ತಿ ದೋಷವ-
ಸಿಳಹುವ ನಮ್ಮದೇವ
ಕರ್ತ ಶ್ರೀವರದಕೇಶವನ ಅಂಘ್ರಿಯ ಸಾರೊ । ಹೆತ್ತೈಯ್ಯಾ ಕೊಲುವಡೆ
ಮತ್ತಾರು ಕಾವರು || ೪ ||

ಏಕತಾಳ

ಹರಿಶರಣೆಂಬವನಾವನಾತನ ದುರಿತ ಕೋಟಿ ಹೋದವು ।
ಮರಳಿ ನೋಡವು ಗ್ರಹಭೂತಗಳು । ಮರಳಿ ನೋಡವು
ವೃಣವ್ಯಾಧಿಗಳು ।
ಹರಿಹರಿ ಅಂತಕಗೆ ಕೂಡುವ । ಮರಳಿ ನೋಡ ಗ್ರಹಭೂತಗಳು ।
ಮರಳಿ ನೋಡಾ ವೃಣವ್ಯಾಧಿಗಳು । ಪರಲೋಕಕ್ಕೈಸೆಯಾದ ಸುಖಕ್ಕೆ
ನಮೊ ನಮೊ ।
ವರವ ಕೇಶವರಾಯ ಮರಳಿ ನೋಡವು ಗ್ರಹಭೂತಗಳು || ೫ ||

ಜತೆ

ಸುತ್ತಿದ ಕಾಲಕರ್ಮವ ಗೆಲುವರ ಕರ್ತ ಶ್ರೀವರದ ।
ಕೇಶವನ ಅಂಘ್ರಿ ಸಾರೋಸುತ್ತಿದ ಕಾಲಕರ್ಮವ ಗೆಲುವರೆ || ೬ ||

# ವರದ ಕೇಶವ ೨

## ಸುಳಾದಿ ೨೧

ರಾಗ ಶಂಕರಾಭರಣ ಧ್ರುವ ತಾಳ

ತಳಿರಂತೆ ಹೆಜ್ಜೆಹೆಜ್ಜೆಗೆ ಚರಣ । ತಳಿಗಳು ಥಳಥಳಿಸುವ ಚೆಳ್ಳುಗರು ।
ಶೆಳೆವಡು ಬಳಕಲು ತೊಡೆಗೆಥಂಡಣೆಎಂಬ ।
ಉಡಿ ಘಂಟೆ ಕಟ್ಟಿಪ ಕಟಸೂತ್ರದುಕೂಲ ।

ನಳಿ ನಳಿಸುವ ತೋಳು ನಗೆ ಮೊಗದ ಬೆಂಬಳಗಾಗುತ ।
ಬರುತ ಸುಳಿಗುರುಳರಳಲೆ ಮಾಗಾಯುಗಳೊಳು ನಲಿವುತ್ತ ।
ಗೋಕುಲದಲ್ಲಿ ಸುಳಿವ ವರದ ಕೇಶವ ।
ಗೋವಳ ಮೂರುತಿ ಉಡುಪಿಯ:ಲಡಗಿದನಿದಕೋ ॥ ೧ ॥

ಮಟ್ಟತಾಳ

ಬಡವರ ನಿಧಿಯೋ ಭಾಗವತರ ಭಾಗ್ಯವೋ ।
ಮಡದಿಯರುಲುಹೋ ಮಹಾಸತಿಯ ಸಂಭ್ರಮವೋ ।
ವಡಲವಿಡಿದು ಪ್ರತ್ಯಕ್ಷವೋ ಲಾವಣ್ಯದ ತೊಡುವೋ ।
ಆನಂದ ಮಡುವೋ ಮೆಣೂ ಪೊಡವಿಪತಿ ವರದಕೇಶವ ಮೂರುತಿ ।
ಕಡಲಕಡಿಯಲುಡುಪಿಯಲಡಗಿದೆ ನೋಡೈ ॥ ೨ ॥

ರೂಪಕತಾಳ

ಗಡಣದ ಗೋಪಾಲರನು ವಂಚಿಸಿ ಬೆಂ। ಬಿಡದೆ ಬಾಹ ಗೋಪಿಯರ ಮರೆಯಿಸಿ ।
ತಡವಿದ ತುರುವಿಂಡುಗಳ ತಪ್ಪಿಸಿ । ತನ್ನವಟ್ಟು ಬಲಿದೇವನ ಬಿಟ್ಟು ।
ಪಡುಗಡಲ ಕಡಿಯಲುಡುಪಿಯಲಡಗಿದರೆ । ನಿನ್ನನು ಬಿಡೆ ಬಿಡೆ ವರದ ಕೇಶವ ಕೃಷ್ಣ ॥ ೩ ॥

ಅಟ್ಟತಾಳ

ಕಡೆವ ಮಂಥನವ ಪಿಡಿದು ಕೆನೆವಾಲನು ಕುಡಿವ ।
ಚಿಕ್ಕಮಕ್ಕಳ ಬಡಿವ ಕಡು ಧೂರ್ತನು ।
ನಿನ್ನ ಮಗನೆಂದು ನಂದನ ಮಡದಿಗೆಲ್ಲ ಸತಿಯರು ದೂರೆ ಆಕೆ ಕೊಲುವಳೆಂದು ।
ಉಡಪಿನೊಳಡಗಿದರೆ ನಿನ್ನ ಪಿಡಿದಿರೆ ವರದಕೇಶವ ಕೃಷ್ಣ ಆಕೆ ಬಡಿವಳೆಂದು ॥ ೪ ॥

ಏಕತಾಳ

ಮುಡಿಗೆ ಸುತ್ತಿದ ಕತ್ತರವಿಲಿಕ್ಕೆಯಲಿ ।
ಪಿಡಿದ ದಾಬು ಗೋವಳಗೋಲು ಉಡಿಯ ಗೋಲಿಯಚೀಲ ।

ಉಡಿಯ ಗೋಲಿಯ ಚೀಲ । ಪೆಗಲಡಿಯ ಕಲ್ಲಿಯ ಕಂಬಳಿಯ ।
ಉಡ್ಡೆಯ ಗೋಲಿಯ ಚೀಲ । ನಡೆ ತಂದನು ತುರುಗಾವಲೀಲೆಯಿಂದ
ಉಡುಪಿಯ ವರದಕೇಶವ ಕೃಷ್ಣ ॥ ೫ ॥

ಜತೆ

ಬಿಡೆ ನಿನ್ನ ದಾಸ್ಯದ ಪರಮ ಪದವಿಯನು ।
ಬಿಡೆ ವರದ ಕೇಶವ ಕೃಷ್ಣ ।
ಬಿಡೆ ನಿನ್ನ ದಾಸ್ಯದ ಪರಮ ಪದವಿಯ ॥ ೬ ॥

# ಚನ್ನಕೇಶವ ೧.

## ಸುಳಾದಿ ೨೨

ರಾಗ ಕಾಂಬೋದಿ ಧ್ರುವ ತಾಳ

ನೋಡಲಿ ಮನವೇ ಜಗದೇಕಲಾವಣ್ಯನಿಧಿಯನನುದಿನ ।
ಬೇಡು ಬೇಡು ತನ್ನೊಡಲವಿವದಾನಿಗಳರಸನಾ ।
ಕೊಡೆಲೊ ಮನವೇ ಸುಖನಿಧಿಯ ಅಜಭವೇಂದ್ರಾದಿ ಸುರೇಶರ ।
ಕೇಡಿಲ್ಲ ತನ್ನಿಜ ಪದವ ನೊಲುವರೇ ನೀನು !
ಆಡಿ ತನದಾಸರೊಡನೆ ದುರಿತ ಕೋಟಿಗಳುರಿವವು ।
ರೂಢಿಗಧಿಕ ದಕ್ಷಿಣ ವಾರಣಾಸಿ ಎನಿಪ ಪುರದಲ್ಲಿ ।
ಆಡಿದ ಭಕುತ ಜನರಿಂದೊಲಿದು ಕರುಣದಲಿ ।
ಗಾಡಿಗಾರ ಚನ್ನಕೇಶವನ ನೀವೈಕುಂಠ ವಲ್ಲಭನ ನೋಡಲೆ ಮನವೆ॥೧॥

ಮಟ್ಟತಾಳ

ಮೆರೆವ ಮುಕುಟ ಮುತ್ತಿನ ಮೂಗುತಿ ಕರ್ಣದಲಿ ।
ನಿರುಪಮ ರತ್ನದೋಲೆ ರಾಜಿಪ ವದನದ।
ಕರ ಚತುಷ್ಟಯದಲಿ ಶಂಖ ಚಕ್ರಗದೆಯ ।
ಸರಸಿಜಾಂಘ್ರಿ ಪೀತಾಂಬರದ ಶ್ರೀ ವೈಕುಂಠವಲ್ಲಭ ವೇಲಾಪುರಾಧಿಪ
ಕರುಣಾಕರ ಚನ್ನ ಕೇಶವ ನಿನ್ನ ಮೂರುತಿಗೆ ನಮೊ ॥ ೨ ॥

ರೂಪಕತಾಳ

ಕಮಲಜ ಪೂಜಿತಾಂಘ್ರಿ ಕಮಲವ ।

ಕಮಲಾಕುಚ ಕುಂಕುಮಾಂಕಿತ ಪಾದಾಂಬುಜವ ।
ಅಮರ ನದಿಯು ಪಡೆದ ಚರಣ ಕಂಜವ ।
ಅಮಿತ ಮಹಿಮಾ ಎನ್ನದೇವನೇ ಒಳಗಿರಿಸಯ್ಯಾ ।
ದ್ಯುಮಣಿ ಶತಕೋಟಿ ತೇಜ ವೈಕುಂಠ ವಲ್ಲಭ ನಮೋ ।
ವೇಲಾಪುರೀಶ ಚನ್ನಕೇಶವ ಅಮರನದಿಯ ಪಡೆದ ಚರಣ ॥ ೩ ॥

ಝಂಪೆ ತಾಳ

ನಿನ್ನ ಕೀರೂತಿ ಕಿವಿಗೆ ನಾಮಾ ನಾಲಿಗೆಯು ಚಾರುಲಾವಣ್ಯ।
ಎನ್ನ ಕಣ್ಣಿಗೆ ಆಧಾರವಯ್ಯ ವೇಲಾಪುರದ ।
ಚನ್ನಕೇಶವ ವೈಕುಂಠರಮಣ ಎನ್ನಕಣ್ಣಿಗೆ ॥ ೪ ॥

ತ್ರಿಪುಟ ತಾಳ

ಭುವನಪತಿ ತಾನೆತ್ತ ನಿನ್ನ ಮಹಿಮೆಗಳೆತ್ತ ।
ಶ್ರೀ ಹರಿಯೇ ಶ್ರುತಿತತಿಗೆಗೋಚರವಯ್ಯಾ ।
ನಿನ್ನ ಮಹಿಮೆಗಳು ಉನ್ನತ ವೈಕುಂಠವಲ್ಲಭ ।
ಚನ್ನಕೇಶವ ಶ್ರೀಪತಿಯೇ ನಿನ್ನಮಹಿಮೆಗಳು ॥ ೫ ॥

ಅಟ್ಟತಾಳ

ಸರಸಿಜೋದ್ಭವ ಶೂಲಿ ಸುರಪ್ರಮುಖ ಸುರಾಸುರಾದಿ ।
ಶರಸಿಧಿ ಮಥನದಲ್ಲಿ ನೆರೆದಿರಲು ।
ಪರಮ ಪುರುಷ ಪುರುಷೋತ್ತಮ ಮತಿಯು ।
ಚನ್ನಿಗರಾಯನೆಂಬ ಪೆಸರು ಸಲುಹುವದಯ್ಯ ।
ಸಿರಿವೈಕುಂಠ ವಲ್ಲಭ ವೇಲಾಪುರಾಧಿಪ ಚನ್ನಕೇಶವ ।
ಪರಮ ಪುರುಷ ಪುರುಷೋತ್ತಮ ॥ ೬ ॥

ಏಕತಾಳ

ಶರಣಾಗತ ಪ್ರತಿಪಾಲಕನೆಂಬ ಬಿರುದನು ಕೇಳಿ ।
ಶರಣು ಹೊಕ್ಕೆನೊ ಎನ್ನವ ಗುಣವನು ವರಸದೆ ನಿನ್ನನಿಜ ।
ಕರುಣವನು ನೆರೆಯಾ ಚನ್ನಕೇಶವ ।
ಅನುಪಮ ಗುಣನಿಧಿ ಆನಂದ ಮೂರುತಿವೇಲಾ ।
ಪುರದ ಶ್ರೀ ವೈಕುಂಠರಮಣ ಎನ್ನವಗುಣವರಸದೇ ॥ ೭ ॥

ಜತೆ

ಮೂರು ಲೋಕ ಮೂರುತಿ ಮೂರು ಲೋಕ ಮೋಹನ ।
ಮೂರು ಲೋಕದೊಡೆಯನೆ ಮೂರು ಲೋಕ ವಂದಿತ ಚನ್ನಕೇಶವ
ವೈಕುಂಠರಮಣ ॥ ೮ ॥

# ವರದರಾಜ ವೆಂಕಟೇಶ ೧

## ಸುಳಾದಿ ೨೩

ರಾಗ ಆಹರಿ ಧ್ರುವ ತಾಳ

ಶ್ರೀ ರಘುರಾಮ ಎಂದಾರಾದರೂ ನೆನೆದರೆ ।
ಘೋರ ಪಾತಕ ಹತ್ತಿರವು ಕಾಣಿರೋ । ಶ್ರೀರಾಮ
ಒಂದು ಬಾರಿಲಿ ಗಿರಿ ಎತ್ತಿ ಅಂದು ಗೋಕುಲವ ಕಾಯ್ದ ।
ಇಂದು ವೆಂಕಟಗಿರಿಯಲಿ ನಿಂದು ವೈಕುಂಠವಿ ।
ದೆಂದು ತೋರುವ ಹಸ್ತದಂದದಿ ನೋಡಿರಿಲ್ಲ ।
ಎಂದೆಂದಿಗೂ ನಮ್ಮ ವರದರಾಜ ವೆಂಕಟೇಶ ಶ್ರೀ ರಘುರಾಮ ॥ ೧ ॥

ಮಟ್ಟತಾಳ

ತುಂಬರ ನಾರದ ಗೀತವ ಸಪ್ತಗರದಿಂ ನಲಿದು ಪಾಡೆ ।
ಧಂ ಧಂ ಧಂ ಧಿಮಿಕ್ಕೆಂದು ನಂದಿ ಮದ್ದಳೆಯನಾದಿಸೆ ರಂಭೆ
ನಾಟ್ಯವ ಮಾಡಲೂ ।
ಅಂಬುಜ ನಾಭನೋಲಗ ತುಂಬಿತು ।
ವರದರಾಜ ವೆಂಕಟೇಶ ಧಂ ಧಂ ಧಂ ಧಿಮಿಕ್ಕೆಂದು ॥ ೨ ॥

ರೂಪಕ ತಾಳ

ವಾರಿಧಿಯ ಕಟ್ಟಬಲ್ಲವರುಂಟೆ ! ರಾವಣನ ಕೊಲ್ಲುವರುಂಟೆ ।
ಬೇರೆ ಈರೇಳು ಜಗವನಾಳ್ದವರುಂಟೆ । ನಮ್ಮ ವರದರಾಜ ವೆಂಕಟೇಶ
ನಲ್ಲದೆ ಪ್ರತಿಯುಂಟೆ ।
ಈರೇಳು ಲೋಕವನಾಳ್ದವರುಂಟೇ ॥ ೩ ॥

ಝಂಪೆ ತಾಳ

ಶಕಟಾಸುರನ ಉಂಗುಷ್ಟದಿ ಒದ್ದ ಪಾದ । ಸುಪ್ರಕಟ ಅಹಲ್ಯಾ ಶಾಪ
ವಿಮೋಚನವಾದ ।

ವಿಕಟದಿಂದೊಲಿದು ಬಲಿಯು ಬಂಧಿಸಿದ ಪಾದ । ಬ್ರಹ್ಮಾಂಡಕಟಕ
ವಡೆದನಮ್ಮ ವರದರಾಜ ವೆಂಕಟೇಶ ವಿಕಟದಿಂದೊಲಿದು ॥ ೪ ॥

ತ್ರಿಪುಟ ತಾಳ

ಈ ಪದ ಐದಲಿದು ಚತುರ್ವಿಧ ಪುರುಷಾರ್ಥ । ಸ್ತುತಿಸಿ ನೀನೆ ಗತಿ
ಎನಲು ಕಾವಾ ।
ಪತಿ ಐವರಿರಲು ದ್ರೌಪದಿಯಾದರದಿ ಕಾಯ್ದ । ವರದರಾಜ ವೆಂಕಟೇಶ
ಪತಿ ಐವರಿರಲು ॥ ೫ ॥

ಅಟ್ಟ ತಾಳ

ಭಜಿಸುವ ಬನ್ನಿರೆಲ್ಲ ಗಜರಾಜ ವರದನ । ಅಜಮಿಳಗೆ ಮುಕ್ತಿಪದವಿತ್ತ
ಹರಿಯ ।
ಭುಜಗರಾಜನ ಪಡೆಯುಲಿ ನಲಿದಾಡುವ । ನಿಜ ಮೂರುತಿ ನಮ್ಮ
ವರದರಾಜ ವೆಂಕಟೇಶ ಭಜಿಸುವ ಬನ್ನಿರೆಲ್ಲ ॥ ೬ ॥

ಏಕತಾಳ

ತ್ರಿಜಗದಲ್ಲಿ ದೇವರದೇವನೆಂದೆನಿಸಿಯೆ । ನಿಜ ಮೂಡಲಾದ್ರಿಯೊಳ್ನೆ
ಲಸಿಹನ ।
ಭಜಕರಿಗೊಲಿದು ಅಭಯುವಿತ್ತು ಸಲಹುವ । ಈ ವರದರಾಜನೆ ಶ್ರೀ
ವೆಂಕಟೇಶ ನಿಜ ಮೂಡಲಾದ್ರಿಯೊಳ್ನೆಲಸಿಹನ ॥ ೭ ॥

ಜತೆ

ಶ್ರೀ ರಘುರಾಮು ಎಂದಾದರಾದರು ನೆನೆದರೆ ಶ್ರೀ
ವರದರಾಜ ವೆಂಕಟೇಶ ಸಲಹುವ ಶ್ರೀ ರಘುರಾಮು ॥ ೮ ॥

# ವರದರಾಜರಾಮು (೧)

## ಸುಳಾದಿ ೨೪

ರಾಗ ದೇಶಿ ಧ್ರುವ ತಾಳ

ಜಾನಕಿಯ ರಮಣ ರಾಮುಗೆ ಜನನ ಉಂಟೆಂದು ।
ಹೀನ ಮತಿಯಲಿ ಖಳರು ತಿಳುಹುತಿಹರು ।
ಕಾನನದೊಳಗೆ ಚರಿಸುತಲಿ ತನ್ನ ।
ಮಾನಿನಿಯು ಕಾಣದೆ ಅತಿದುಃಖಿಸಿದನೆಂದೆಂಬರೂ ।

ತಿಳಿದು ಹೀನಬಲದಲಿ ವಾಲಿಯನು ಕಾಣದಲೆ ಬೇಗ ।
ಬಾಣದಿಂದಲಿ ಕೊಂದನೆಂಬರೂ ।
ಧಿಟ್ಟ ಮಾನವರ ಕೊಲುವರೆ ಬೇಗದಿಂದ ।
ವಾನರ ಸಖನಾದನೆಂದೆಂಬರೂ ।
ನಿತ್ಯ ಜ್ಞಾನಾದಿ ಬಲಮೂರುತಿ ವರದರಾಜರಾಮ,ತಾ ।
ಮಾನವರೊಳಗೆ ಮನುಜನಂತಿರ್ದನೆಂಬುದಕ್ಕೆ ಜಾನಕಿರಮಣ ॥ ೧ ॥

ಮಟ್ಟತಾಳ

ಶಿಶು ತನದಲ್ಲಿ ಮುನಿಯ ಯಾಗವ ಸಲಹುವೆನೆಂದು ।
ವಸುಧೆಯೊಳಗೆ ಅಸುರರ ಬಲವ ನೊರಸಲಿಲ್ಲವೆ ಕಾಣಿರೋ ।
ಪಶುಗತಿ ಧನುವನು ಕರಕಮಲದಿ ಪಿಡಿಯುತ್ತಲಿ ।
ನಸುನಗುತ ಧನುವ ಮುರಿದು ಬಿಸುಡಲಿಲ್ಲವೆ ಕಾಣಿರೋ ।
ಪಶುಪತಿ ಕುಸುಮ ಶರನಪಿತ ಚಿದಾನಂದೋತ್ತಮ ಮೂರುತಿ ।
ದಶರಥನಿಂದ ಜನಿಸಿದನಂತೆ ವರದರಾಜರಾಮಾ ॥ ೨ ॥

ರೂಪಕತಾಳ

ಆವನಂಗುಷ್ಟ ಚಿಮಿಸಲ ಸುರತನು। ಭೂವಳಿಯನು ತಿಳಿಖಳರ ಸಂಹರಿಸಿತು ।
ಆವನದೊಂದಂಬು ತಾಳೇಳ ಕೆಡಹಿತು । ಆವನ ಕಣ್ಣ ಕೆಂಪು ಶರಧಿಯನೀಂಟಿತು ।
ಆವನದೊಂದಂಬು ಆವನ ಪೂರ್ಬಿಯಿಂದ ಭೂಭಾರ ವಿಳಿಹಿತು ।
ಶ್ರೀವರದ ರಾಜರಾಮನ್ನಿಂದಿರುಂಟಿ ಜಗದೊಳು ಆವನದೊಂದಂಬು ॥೩॥

ಅಟ್ಟತಾಳ

ಅಸುರಸುತನು ಕಪಿಕಟಕವನ ಜ್ಞಾನ। ವಶಕೆ ಸಿಕ್ಕಿಸಿ ವಾನರರಾಜ ಮೊದಲಾಗಿ ।
ಉಸರು ಬಿಡುವದಿಲ್ಲ ಮಿಸಕು ಲರಿತುದಿಲ್ಲ । ಶಶಿನೆ ಒಮ್ಮೆಯಾದರೆ ನಡೆನುಡಿವರೆ ।
ಉಸರು ಬಿಡುವದಿಲ್ಲ । ಅಸಮವರದ ರಾಜರಾಮ ಶರಪಿಡೆಭರ ।
ವಸದಲ್ಲಿ ತರುಗಿರಿಗಳ ಪಿಡಿದರುನೋಡು । ಉಸರು ಬಿಡುವದಿಲ್ಲ ॥ ೪ ॥

ಏಕತಾಳ

ರಾಮನಾಳು ಹನುಮನು ಶರಧಿಯನು ಲಂಘಿಸಿದ ।
ಭೂಮಿ ಸುತೆಯ ರೂಪಿಂಗೆ ರಾಮನ ಮುದ್ರಿಕೆಯನಿತ್ತು ।
ಕಾಮಚಾರಿಯಾದ ರಾವಣನ ವನವನು ಕಿತ್ತು ।
ತಾಮಸ ಖಲಸೂತರನ ಸಂಯಮ ಪುರಕಿತ್ತಾ ।
ಕಾಮಚಾರಿಯಾದ ರಾಮನೊಳು ತನ್ನುರಿಯಲ್ಲಿ ಲಂಕೆಯನುರುಹಿದಾ ।
ರಾಮನಾಳು ಕ್ಷಣಕ್ಕೆ ಸಂಜೀವನ ಗಿರಿಯತಂದ ।
ರಾಮನ ಕಟಕವ ಸಲುಹೀ ಮುರಳೀಪಾಡಿದಾ ।
ರಾಮ ವರದರಾಜನ ಮಹಿಮೆ ಇನ್ನೆಂತು ಉಂಟೋರಾಮನಾಳು॥ ೫ ॥

ಜತೆ

ದಶಮುಖಗಳನರಿವುತ್ತಲಿ ವರದರಾಜ ।
ದಶರಥರಾಮ ತ್ರಿದಶರಿಗೆ ಸುಖವಿತ್ತು। ॥ ೬ ॥

# ವರದರಾಜ ಕೃಷ್ಣ (೧)

**ಸುಳಾದಿ ೨೫**

ರಾಗ ಧ್ರುವ ತಾಳ

ಸುರ ಮುನಿ ಭೂಸುರ ಲೋಕಂಗಳಲ್ಲಿ ಚರಿಸುವ ಪರಿಯಾ ।
ಆರು ವರ್ಣಸಲಳಪೆ ಧರಿಸಿದ ಕೆಂಜೆಡೆಯ ಕಿರಣಂಗಳಿಂದ ।
ಪಿರಿ ಸೊಸಲದಿ ಎರಡು ನಾಮಗಳೆಂಬ ।
ವರಗದ ಶರಣಗಳೆನುತ ಕರುಣದಿ ತೋರುತ್ತಲಿ ।
ಕೊರಳ ತುಲಸಿ ಸರಸಿಜ ಮಣಿಯು ।
ಸಿರಿ ಮುದ್ರೆ ಮೆರೆವುತ್ತಿರೆ ।
ಸರಿಗಮಪದನಿಸ ಎಂಬ ಜಪ್ಪದಾ
ಸ್ವರಸೋಪಾನಗಳಿಂದ ವರದರಾಜ ಕೃಷ್ಣನಾಮ ।
ಝೇಂಕಾರ ಡಂಗುರ ಹೊಯುತ್ತ ।
ಸುರ ಮುನಿ ಚರಿಸುವ ಚರಿಯಲಿ ।
ನರಕಿಗಳನುತ್ತರಿಸುತ ಸುರಮುನಿ। ॥ ೧ ॥

ಮಟ್ಟತಾಳ

ಘೋರ ಸಂಸಾರ ವಾರಿಧಿ ಉತ್ತಾರಕನೆಂದು ।
ನಾರದ ಮಾತಿನಲಿ ನಾನಾ ದುರಿತರಿಪು ಎಂದು ಪಾಡಲು ನಾರದ ।
ಘೋರ ನರಕಿಗಳು ಲಾಲಿಸಿಸವಿವೃತ ।
ಸಾರಿದರು ವರದರಾಜ ಕೃಷ್ಣನಾಮ ಪದವಿಯು ।
ಘೋರನರಕಿಗಳು ॥ ೨ ॥

ರೂಪಕತಾಳ

ಈರೆಂಟು ಸಾವಿರ ನೂರೆಂಟು ಹೆಣ್ಣು ಕೃಷ್ಣ ।
ಪೋರಂತೆ ರಮಿಸುವ ಪರಿಯ ನೋಡಲೆಂದು ।
ಧಾರುಣಿ ಗೈದಿದ ನಾರದ ।
ವಾರಿಜ ಭವ ವಂದ್ಯ ವರದರಾಜ ಕೃಷ್ಣ ।
ನಾರದ ಮುನಿಯನಾದರದಿ ಅರ್ಚಿಸುತ ನಾರದಾ । ॥ ೩ ॥

ಅಟ್ಟತಾಳ

ನಮ್ಮ ಪ್ರಾಣೇಶನ ಸುಮ್ಮನೊಮ್ಮೆ ಬಂದು ।
ಗಮ್ಮನೆ ಸೆಳದೋದ ಅಕ್ರೂರಗೆ ಬೊಮ್ಮನೇಕೆ ಸೃಜಿಸಿದನು ।
ಅಮ್ಮಾ ನಮ್ಮ ನಿಮ್ಮಿದ್ದೆಡೆಗೆ ನಿಮಿಷಕೆ ಸಲಿಸುವ ।
ಬೊಮ್ಮನೇಕೆ ಸೃಜಿಸಿದನು ।
ನಿರ್ಮಲರೂಪ ವರದರಾಜ ಕೃಷ್ಣತಾ ।
ನಮ್ಮೊಳು ಬೆಳಮಳದಿ ಚರಿಸುವನಂತೊ ।
ಬೊಮ್ಮನೇಕೆ ಸೃಜಿಸಿದನು। ॥ ೪ ॥

ಏಕತಾಳ

ತಿಂಗಳ ಬೆಳದಿಂಗಳೊಳಗೆ ತಂಗಾಳಿಯು ಸುಳಿವುತಲೊಯ್ಯನೆ ।
ರಂಗಪುಳಿನಂಗಳೊಳಗೆ ನಮ್ಮರಂಗ । ಸಂಗದೊಳಿಂಗಡಲೊಳು
ಮುಳುಗಿಪ್ಪರಂಗ ।
ಮಂಗಳರೂಪ ವರದರಾಜಕೃಷ್ಣತಾ । ಕಂಗಳ ಪಾಂಗದಿಸಂಗಡಿಸುವ
ನೆಂತೊ ।
ರಂಗ ಪುಳಿನಂಗಳೊಳಗೆ। ॥ ೫ ॥

ಜತೆ

ಶ್ರೀಪತಿ ವರದರಾಜ ಕೃಷ್ಣ ವಿರಹತಾಪದಿ ।
ಗೋಪಿ ಗೋಪಾಂಗನೆಯರು ಈ ಪರಿ ಕಳೆದರೂ । ॥ ೬ ॥

# ವರದರಾಜ ಕೃಷ್ಣ (೨)

## ಸುಳಾದಿ ೨೬

ರಾಗ ಧನಾಸಿ ಧ್ರುವತಾಳ

ಹರಿ ರವಿಯುದಯವ ಕಾಣುತ । ಕರಕಮಲದಿ ಶಿರೆವಿಡಿವುತ ।
ಕರುಗಳ ಕಣ್ಣಿಯ ಕಳಚುತ । ಸರಿಗೋಪರ ಸ್ವರಗೈಯುತ ।
ತುರುಗಾತಿಯರ ಮೊಗವ ನೋಡುತ । ತರಳರ ಕರಪಿಡಿವುತ ಶ್ರೀ ।
ಹರಿ ರವಿಯುದಯುವ ಕಾಣುತ ಅಂ ।
ಬರದಲಿ ಸುರರೆಲ್ಲರು ಸ್ತುತಿಸುತ್ತಿರೆ । ತರಣ್ಯ ಶರಣ ವರದರಾಜ ಕೃಷ್ಣತಾ ।
ಕರುಗಳ ಹಿಂದೆ ಮುಂದೆ ಚಲಿಸುತ ಶ್ರೀಹರಿ ॥ ೧ ॥

ಮಟ್ಟತಾಳ

ಕೊಳಂಗಳ ತಡಿಯಲಿ ಜಲಜ ಪಾತ್ರಂಗಳ ಮೇಲೆ ।
ಜಲಜನಾಭ ಗೆಳೆಯರೊಡಗೂಡಿ ಕಲಿಸೋಗರ ।
ಸವಿವುದಚ್ಚರಿ ಏನಯ್ಯ ಜಲಜನಾಭ ।
ಇಳೆಯ ವರದರಾಜ ಕೃಷ್ಣವತ್ಸಗಳನು ಕಾಯ್ದು ।
ಜಗವಂ ಮೋಹಿಸುತ ಜಲಜನಾಭ। ॥ ೨ ॥

ರೂಪಕತಾಳ

ಕಲ್ಪತರುವ ನಮ್ಮ ತ್ರಿಭಂಗಿಯಲಿ ಪೊಂಗೊಳಲೀಲಾವ್ಯತದನ್ನೀಂಟಲು ।
ಲಲನೆಯರು ಕೇಳಿಸವಿವುತ್ತಾನಂದದಲಿ ಪಿರಿದು ।
ತಂದ ಚರಿಯೇನ್ನೈಯಾದದರ । ಲಲನೆಯರು ಕೇಳಿ ಎಳೆದ ವರದ ರಾಜಕೃಷ್ಣ ।
ಕೊಳನೂದೆ ಲಲನೆಯರುಕೇಳಿ। ॥ ೩ ॥

ಅಟ್ಟತಾಳ

ಗರುಡನ ಮೇಲೆ ಉರಗ ಶಿರವನೀಡ್ದೆ ।

ಕರಿವಿಂಡು ಸಿಂಹದ ಮೇಲೆ ಕರವನಿಟ್ಟು ।
ಹರಿಣಗಳೆಲ್ಲ ಪುಲಿಗಳೊಳು ಚರಿಸಲು ।
ತರಣಿ ಕಿರಣದಿ ಕುಮುದಗಳರಳುತ್ತಿವೆ ।
ಹರಿಣಗಳೆಲ್ಲ ವರದರಾಜ ಕೃಷ್ಣನ ಗಾನಾಮೃತವ ।
ಧರಿಸಿ ಮೋಹಿಸುವ ಸುದಿವಸವನು ನೋಡಿ ಹರಿಣಗಳೆಲ್ಲ ॥ ೪ ॥

ಏಕತಾಳ

ಬಂದು ವನದಲಿ ಗೆಳೆಯರ ಒಡನೆ ।
ಇಂದಿರಾಪತಿ ತುರು ವಿಂಡುಗಳ ಚರಿಸುತ ।
ಅಂದದ ಕುಸುಮಾಭರಣವ ತಾಳುತಾ ।
ನಂದದಿ ಕವಾಟವನಾಡುತ ಚಂದದಿ ।
ಮಂದಹಾಸ ವರದ ರಾಜಕೃಷ್ಣ ನೋಡುತ ।
ನಿಂದ ಸಂಭ್ರಮವನುಪಮಿಸಲಳವೆ ಅಂದದಾ। ॥ ೫ ॥

ಜತೆ

ನಂದ ವರದರಾಜ ಕೃಷ್ಣ ಮುಖೇಂದುವ ।
ನಯನ ಚಕೋರದಿ ಸವಿವುತಾನಂದದಾ। ॥ ೬ ॥

# ವರದರಾಜ ಕೃಷ್ಣ (೩)

## ಸುಳಾದಿ ೨೭

ರಾಗ ಭೂಪಾಳಿ ಧ್ರುವ ತಾಳ

ಕಡುಮುದ್ದು ಕೃಷ್ಣ ಗೋಕುಲದಲ್ಲಿ ಗೆಳೆಯರ ।
ಒಡನಾಡಿ ಮುದದಿ ನಲಿವನೊಮ್ಮೊಮ್ಮೆ ಆ ಆ ಆ ।
ಸಡಗರದಿಂದ ಪರಿದುತಂದು ಜನನಿಯು ।
ಮುಡಿಯು ಜಡಿದು ಮುದ್ದುನೀವನೊಮ್ಮೊಮ್ಮೆ ನಂದನಂದನ ।
ಮಡದಿಯು ತೊರದ ಕುಚಗಳ ಕರದಿಂದ ।
ಪಿಡಿದು ಮೊಗದಲಿ ಸವಿವನೊಮ್ಮೊಮ್ಮೆ ಆ ಆ-ಕಡುಮುದ್ದು ।
ಆ ಆ ಆ ಒಡಕೋಪವಿಡಿದು ಬೊಮ್ಮೆ ಕರದಿಂದ ।
ಶಿರಗ್ಗಿಡಿದು ಅಡಿಯಿಡೆ ಬೇಗ ಕಂಗೆಡುವನೊಮ್ಮೊಮ್ಮೆ ।

ವೃಂದಾವನದಲಿ ಸುಳಿವನಲ್ಲೆ ಅಮರ ।
ವೃಂದಾವನೆಲ್ಲವ ಮೋಹಿಸುತ ಪ್ರಾಣಿ ।
ವೃಂದವು ಇರವ ಮರಸುತಲಿ ಗುಣ ಗಣಗಣ ।
ವೃಂದಾ ವರದರಾಜಕೃಷ್ಣ ತಾ ಹೆಂಗಳ ।
ವೃಂದವ ಮರುಳುಗೊಳಿಸುತಲೆಮ್ಮಯ ಕೆಳದಿ ॥ ೧ ॥
ವೃಂದಾವನದಲ್ಲಿ ಸುಳಿವನಲ್ಲೆ ॥

ಮಟ್ಟ ತಾಳ

ಲೀಲಾವತಿಯೊಳೆಮ್ಮನಲ್ಲನನೊಯ್ದು ನಮ್ಮೆಲ್ಲರ ಮೋಹಿಸಿದ ।
ಅಕ್ರೂರಗೆ ಸಲ್ಲದ ಕ್ರೂರನೆಂದೆಂಬರು ।
ಒಳ್ಳೆಯ ಪೆಸರು ಸಲ್ಲದು ನಮ್ಮೆಲ್ಲರ ।
ಬಲ್ಲಿ ತನವನು ಎಲ್ಲಿಗ್ಹೋಯಿತು ।
ವಲ್ಲಭೆ ಸಲ್ಲದ ಕ್ರೂರನೆಂದೆಂಬರು ।
ಪುಲ್ಲ ಶರನಪಿತಸಿರಿ ವರದರಾಜ ಕೃಷ್ಣನ-
ಮೆಲ್ಲರುಗಳ ಚೆಲುವಿನ ।
ಜಲದಲ್ಲಿ ಮುಳಗುವರಂತೆ ಪುಲ್ಲಶರನ। ॥ ೨ ॥

ರೂಪಕ ತಾಳ

ವೃಂದ ವೃಂದದೊಳಾನಂದವೀವನು ಬೇಗ ।
ದಿಂದ ಕರದೊಯ್ದು ಬುಧರು ಯೇ ।
ನೆಂದು ಕರದರೆ ಈ ಪೆಸರಿನಲಿ ಅದ ।
ರಿಂದ ಮೋಹಿಸಿದೆವು ಮಂದಮತಿಯಲಿ ಯೇ।
ನೆಂದು ಕರದರೆ ಈ ಪೆಸರಿನಲಿ ।
ಇಂದಿರೇಯರಸ ವರದರಾಜ ಕೃಷ್ಣತಾ ।
ಮಂದಹಾಸದಲಿ ಚಂದ್ರಿಕೆಯ ಸೂಸುವರು ಏ ।
ನೆಂದು ಕರದರೆ ಈ ಪೆಸರಿನಲಿ। ॥ ೩ ॥

ಝಂಪೆ ತಾಳ

ಪ್ರೀತಿಯಿಂದಲಿ ನಾವು ಪೋತು ಸೋತೆವು ಪ್ರಾಣ ।
—ತತನನ ಮಾಡಿ ಕರದೊಯ್ದುಗೆ ।

ಯಾತಕೀ ಪೆಸರನಿತ್ತ ಕಾಣಿರೋ ।
ಸಾತ್ವಿಕರರಸ ಸಿರಿ ವರದರಾಜ ಕೃಷ್ಣ ನಮ್ಮ ಮನದ ।
ಕಾತರವ ಸಲಿಸಿ ಅತಿ ಪ್ರೀತಿಯಾದ ಮಾತು ।
ಯಾತಕೀಪೆಸರನಿತ್ತುದ ಕಾಣಿರೋ। ॥ ೪ ॥

ತ್ರಿಪುಟ ತಾಳ

ಸ್ಮರಪಿತಿಮ್ಮಯ ತನುವನು ಮರುಳು ಮಾಡಿದ ಗೋವಳೆನ್ನ ।
ಕಿರುವತನದಲಿ ಕರದೊಯ್ದು ಮೂರುಕನು ।
ಮನದ ಇರವನರಿಯದೆ ಕರೆದನು ।
ಕಿರವಿನೊಳಗೊಳಗಿರುವ ಮನದಿರವನರಿಯದೆ ಕರೆದನು ।
ತರಳೊಳುಪಚರಿಪ ಸಿರಿವರದರಾಜ ಕೃಷ್ಣ ।
ನಮ್ಮ ಸೆರಗ ಕರದಲಿ ಪಿಡಿದು ಸೆಳೆವುತ ।
ಹರುಷ ಶರಧಿಯ ಲೊರಗಿಸುವಂತೆ ಮನದ !
ಇರವನರಿಯದೆ ಕರೆದನು ॥ ೫ ॥

ಅಟ್ಟತಾಳ

ನಮ್ಮ ಪ್ರಾಣೇಶನ ಸುಮ್ಮನೊಮ್ಮೆ ಬಂದು ।
ಗಮ್ಮನೆ ನೆಳದೊಯ್ದು ಅಕ್ರೂರಗೆ ಬೊಮ್ಮನೇಕೆ ಸೃಜಿಸಿದನು ।
ಅಮ್ಮ ನಮ್ಮನಿಮ್ಮಿದ್ದೆಡಿಗೆ ನಿಮಿಷಕೆ ಸಲಿಸುವ ।
ಬೊಮ್ಮನೇಕೆ ಸೃಜಿಸಿದನು ।
ನಿರ್ಮಲರೂಪ ವರದರಾಜ ಕೃಷ್ಣ ತಾ ।
ನಮ್ಮೊಳು ಬೆಳಮಳದಿ ಚರಿಸುವನೆಂತೋ ।
ಬೊಮ್ಮನೇಕೆ ಸೃಜಿಸಿದನು। ॥ ೬ ॥

ಏಕತಾಳ

ತಿಂಗಳ ಬೆಳದಿಂಗಳೊಳಗೆ ತಂಗಾಳಿಯ ಸುಳುವುತಾಲೊಯ್ಯನೆ ।
ರಂಗ ಪುಳಿನಂಗಳೊಳಗೆ ನಮ್ಮಂಗ ।
ಸಂಗ ದೊಳಿಂಗಡಲೊಳು ಮುಳುಗಿಪ್ಪರಂಗ ।
ಮಂಗಳರೂಪ ವರದರಾಜ ಕೃಷ್ಣ ತಾ ।

ಕಂಗಳ ಪಾಂಗದಿ ಸಂಗಡಿಸುವನೆಂತೋ ।
ರಂಗ ಪುಳಿನಂಗಳೊಳಗೆ ॥ ೭ ॥

ಜತೆ

ಶ್ರೀಪತಿ ವರದರಾಜ ಕೃಷ್ಣ ವಿರಹತಾಪದಿ ।
ಗೋಪಿ ಗೋಪಾಂಗನೆಯರು ಈ ಪರಿ ಕಳೆದರು। ॥ ೮ ॥



## ನಮ್ಮ ಮಂಡಲದಲ್ಲಿ ದೊರೆಯುವ ಪುಸ್ತಕಗಳ ಪಟ್ಟಿ

| | | |
|---|---|---|
| ೧ | ತಾರತಮ್ಯ ಸುಳಾದಿಗಳು | ೧—೮—೦ |
| ೨ | ಶ್ರೀ ಸುಮಧ್ವವಿಜಯ ಭಾಮಿನಷಟ್ಪದಿ ಸಹಿ ೫ನೇಭಾಗ | ೧—೮—೦ |
| ೩ | ಶ್ರೀ ಪ್ರಾಣೇಶವಿಠಲರ ಕೀರ್ತನಮಾಲಾ ೧೫ ಪುಸ್ತಕ | ೫—೦—೦ |
| ೪ | ಶ್ರೀ ವಿಜಯದಾಸರ ಪ್ರಾರ್ಥನಾ ಸುಳಾದಿ (೧೦೦) | ೨—೦—೦ |
| ೫ | ಸೃಷ್ಟಿಪ್ರಕರಣ ಸುಳಾದಿಗಳು ತಾತ್ಪರ್ಯಸಹ | ೩—೦—೦ |
| ೬ | ಕ್ಷೇತ್ರಮಹಿಮಾ ಸುಳಾದಗಳು | ೩—೪—೦ |
| ೭ | ಸಾಧನಭಾಗ ಸುಳಾದಿಗಳು ಭಾಗ ೧ ಭಾಗ ೨ | ೨—೮—೦ |
| ೮ | ಉಪಾಸನಾಭಾಗ ಸುಳಾದಿಗಳು | ೨—೮—೦ |
| ೯ | ಪ್ರಮೇಯಭಾಗ ಸುಳಾದಿಗಳು | ೧—೪—೦ |
| ೧೦ | ಸ್ತೋತ್ರಭಾಗ ಸುಳಾದಿಗಳು | ೨—೦—೦ |
| ೧೧ | ಶ್ರೀ ವಿಜಯದಾಸರ ೨೫೬ ಪದಗಳು ತಾರತಮ್ಯ ಕ್ರಮ ನಿತ್ಯ ಭಜನೆಗೆ ಅನುಕೂಲ ಭಾಗ ೧ | ೧ ೧೨—೦ |
| ೧೨ | ಶ್ರೀ ವಿಜಯದಾಸರ ಉಳಿದ ಪದಗಳು ೨೫೦ ಭಾಗ ೨ | ೧—೧೨—೦ |
| ೧೩ | ಶ್ರೀ ವಿಜಯದಾಸರ ಸ್ತೋತ್ರ ಪದಗಳು ವಿಶದವಾದ ಚರಿತ್ರೆ ಸುಮಾರು ೩೦೦ ಪುಟ | ೨—೮—೦ |
| ೧೪ | ಶ್ರೀ ಗೋಪಾಲವಿಠಲರು ೪ ಜನ ದಾಸರ ಸುಳಾದಿ | ೨—೮—೦ |
| ೧೫ | ಶ್ರೀ ಐಜಿಸ್ವಾಮಿಗಳು ವಾಸುದೇವ ವಿಠಲರ ಕೃತಿಗಳು ಚರಿತ್ರೆ ಸಹ | ೧—೪—೦ |
| ೧೬ | ಶ್ರೀ ಮೊದಲಕಲ್ ಶೇಷದಾಸರ ಕೃತಿಗಳು | ೨—೦—೦ |
| ೧೭ | ಶ್ರೀ ಲಕ್ಷ್ಮೀಲೀಲಾಮೃತ | ೦—೪—೦ |
| ೧೮ | ಶ್ರೀರಾಮ ಭಜನೆ | ೦—೪—೦ |
| ೧೯ | ಶ್ರೀ ಹನುಮದ್ವೃತ ಕಥಾ ಸುಳಾದಿ | ೦—೬—೦ |
| ೨೦ | ಶ್ರೀ ಹರಿಕಥಾಮೃತಸಾರ ಮೂಲ ಶುದ್ಧಪ್ರತಿ ದಾಸರ ಚರಿತ್ರೆ ಸಹ | ೨—೪—೦ |
| ೨೧ | ಶ್ರೀ ಹರಿಕಥಾಮೃತಸಾರ ಸಂಗ್ರಹ ಗದ್ಯ | ೧—೮—೦ |
| ೨೨ | (ಗದ್ಯ) ಸದಾಚಾರ | ೧—೪—೦ |
| ೨೩ | ,, ಪಂಚಭೇದ ಶ್ರೀ ಗುರುವಿಜಯಕೃತ | ೧—೪—೦ |

೨೪ ,, ಬ್ರಹ್ಮಚರ್ಯ ೧—೮—೦

೨೫ (ಗದ್ಯ) ಅಧ್ಯಾತ್ಮಮಾಲಾಭಾಗ ೧-೨ ೨—೮—೦

೨೬ ಸಂಧ್ಯೋಪಾಸನೆ ಭಾಗ ೧-೨ ೨—೮—೦

೨೭ ಶ್ರೀ ಆದ್ಯಾದಿ ಹರಿದಾಸರ ಸುಳಾದಿಗಳು ೧೪೦ ಪುಟ ೧—೪—೦

೨೮ ಶ್ರೀ ನರಹರಿ ತೀರ್ಥಾದಿ ದಾಸರ ಸ್ತೋತ್ರ ಪದಗಳು ೦-೧೨—೦

೨೯ ಶ್ರೀ ಮನೋಹರ ವಿಠಲವಿರಚಿತ ಶ್ರೀಮತ್ ಅನಂತವ್ರತಕಥಾ ಭಾರತ ಸಭಾಪರ್ವಯುಕ್ತ ನವರಸಾಲಂಕಾರಭರಿತ ವಾರ್ಧಿಕ ಷಟ್ಪದಿ ೧೦ ಸಂಧಿಯುಕ್ತ ಮಹಾಕಾವ್ಯ ೩೦೦ ಪು. ೩—೮—೦

೩೦ ಶ್ರೀ ಕರ್ನಾಟಕ ಹರಿದಾಸ ಸಾಹಿತ್ಯ ಗದ್ಯಗ್ರಂಥ ದಾಸ ಸಾಹಿತ್ಯ ವಿವಿಧ ಲೇಖಗಳು ಸುಮಾರು ೩೦೦ ಪುಟ ೨—೮—೦

೩೧ ಚಕ್ರಾಬ್ಜಮಂಡಲ ಕಂಕಣಾಕಾರ ಸುಳಾದಿ ಸಂಕ್ಷಿಪ್ತ ತದ್ವಿವರ ಪ್ರಮಾಣ ಸಹಿತ ೦—೧೨—೦

೩೨ ಶ್ರೀ ವರದೇಂದ್ರ ಕರ್ನಾಟಕ ಹರಿದಾಸ ಸಾಹಿತ್ಯ ೧ನೇ ವರ್ಷ ದ್ವೈಮಾಸಿಕ ಸಂಚಿಕೆಗಳು (೬) ಕ್ಕೆ ೬—೦—೦

ವಿರಾಟ-ವಿಶ್ವರೂಪ ಪಟಗಳು ಪ್ರತಿಯೊಂದಕ್ಕೆ ೮ ಅಣೆ ರಥದ ಪಟ ೪ ಅಣೆ ಶ್ರೀ ವಿಜಯದಾಸಾದಿ ೧೧ ಪಟಗಳು ಪ್ರತಿಯೊಂದಕ್ಕೆ ೨ ಅಣೆ ಟಪಾಲವೆಚ್ಚ ಬೇರೆ, ಕಮೀಶನ್ ಏಜಂಟರಿಗೆ ೧೦೦ ಕ್ಕೆ ೧೨೫ ರೂ. ಪುಸ್ತಕ ಕೊಡವೆವು, ಟಪಾಲ ವೆಚ್ಚ ಬೇರೆ ಹೆಚ್ಚಿನ ವಿವರಗಳಿಗಾಗಿ ಪತ್ರವ್ಯವಹಾರ ಮಾಡಿರಿ. ಲಿಷ್ಟ ಕೇಳುವವರು ಉತ್ತರ ಅಪೇಕ್ಷಿಸುವವರು ಸ್ಟ್ಯಾಂಪ ಕಳಿಸಿರಿ.

## ಶ್ರೀ ವರದೇಂದ್ರ ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕ (೧೯೫೭) ಕ್ಕೆ

ಇಂದೇ ಚಂದಾದಾರರಾಗಿರಿ ಅಂಚೆ ಸಹ (೬) ರೂ. ಸಾಂಪ್ರದಾಯಿಕವಾಗಿ ಪರಿಶುದ್ಧ ಸಂಶೋಧಿಸಿದ ಸಾಹಿತ್ಯ ಗದ್ಯಪದ್ಯ ವಿಭಾಗ ಸುಳಾದಿ ಸ್ತೋತ್ರ ಪದಗಳು ಕಾವ್ಯವಿಭಾಗ ಸಾಂಪ್ರದಾಯಿಕ ವಿದ್ವಾಂಸರ ಲೇಖನಗಳದ್ವಾರಾ ಮಧ್ವಸಿದ್ಧಾಂತವನ್ನು ದಾಸಸಾಹಿತ್ಯದ್ವಾರಾ ಬೀರಲು ಮುಡುಪಾದ ತಿಳಿಗನ್ನಡ ದ್ವೈಮಾಸಿಕ ಕ್ರೌನ ೧/೮ ಪುಟ ೧೧೪ ಗ್ಲೇಜ ಕಾಗದ ಸುಂದರವಾದ ಮುದ್ರಣ ಸರಿಯಾಗಿ ೨ ತಿಂಗಳಿಗೊಮ್ಮೆ ಹೊರಡುವದು.

ಹನುಮಂತರಾವ ಗೊರಬಾಳ ಲಿಂಗಸೂಗೂರ